# ಮಾನಸ

ಸಂಪುಟ : ೩ ಸಂಚಿಕೆ : ೬
ಜೂನ್ ೧೯೯೦



ವಿಳಾಸ "ಮಾನಸ ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ (ಪೊ)
ಬೆಂಗಳೂರು—560067

ಬಿಡಿಪ್ರತಿ :2 ರೂ.
ಸೂಚನೆ : ವಾರ್ಷಿಕ ಚಂದಾ :20ರೂ.
ಆಜೀವ ಚಂದಾ : 250ರೂ.
ಒಂದು ವಿಶೇಷಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು.
ಹಣವನ್ನು ಬ್ಯಾಂಕ್ ಡ್ರಾಫ್ಟ್, ಎಂ. ಓ.
ಮೂಲಕ ಸ್ವೀಕರಿಸಲಾಗುವುದು.

## ಈ ಸಂಚಿಕೆಯಲ್ಲಿ .. .....



ಮುಖಪುಟ: ಆರ್. ಎಂ. ಹಡಪದ್



# ಸಂಪಾದಕೀಯ

ಜೂನ್ ೧೪ ರಂದು ಪಶ್ಚಿಮ ಬಂಗಾಳದ ಪರಗಣ ಜಿಲ್ಲೆಯ ಒರ್ಕಲ್ಲೊತಲ್ಲಾ ಗ್ರಾಮದಲ್ಲಿ ೫೦ ವರ್ಷದ ಮತ್ತು ೩೦ ವರ್ಷದ ಇಬ್ಬರು ಮಹಿಳೆಯರ ಮೇಲೆ ದೌರ್ಜನ್ಯ ನಡೆದಿರುವುದಾಗಿ ವರದಿಯಾಗಿದೆ. ಅದೇ ವಾರದಲ್ಲಿ ಮೇಲಿನ ಘಟನೆ ನಡೆವ ಮುನ್ನ ಪೊಲೀಸ್ ಸ್ಟೇಷನ್ನಲ್ಲಿಯೇ ವಿವಾಹಿತ ಮಹಿಳೆಯನ್ನು ಆರಕ್ಷಕರೇ ಮಾನಭಂಗಗೊಳಿಸಿದ್ದು ಹೂಗ್ಲಿ ಜಿಲ್ಲೆಯಲ್ಲಿನ ಪ್ರಕರಣ. ಈ ದುರ್ಘಟನೆಗಳಿಗೂ ಸ್ವಲ್ಪ ದಿನಗಳ ಮೊದಲು ಬಂಟ್ವಾಲಾದ ಆರೋಗ್ಯ ಕಾರ್ಯಕರ್ತೆಯರು ಸಾಮೂಹಿಕ ಮಾನಭಂಗ ಅನುಭವಿಸಿದ್ದಷ್ಟೇ ಅಲ್ಲ, ಅವರಲ್ಲೊಬ್ಬರು ಕೊಲೆಗೀಡಾದರೆನ್ನುವುದು ಮತ್ತೂ ನೋವಿನ ಸಂಗತಿ. ಜೂನ್ ೧೪ರಂದು ನಡೆದ ಘಟನೆಯಲ್ಲಿ ಕಮ್ಯುನಿಸ್ಟ್ ಕಾರ್ಯಕರ್ತರು ಭಾಗಿಯಾಗಿದ್ದರೆಂಬ ವರದಿಯೂ ಬಂದಿದೆ.

ಕಳೆದ ಮಹಾಚುನಾವಣೆಗೆ ಮುನ್ನ ಎಲ್ಲ ರಾಜಕೀಯ ಪಕ್ಷಗಳೂ ಮಹಿಳೆಯರ ರಕ್ಷಣೆ ಬಗ್ಗೆ, ಉದ್ಧಾರದ ಬಗ್ಗೆ ಇನ್ನಿಲ್ಲದಷ್ಟು ಕಾಳಜಿ ತೋರಿದ್ದವು. ಚುನಾವಣೆಗಳಲ್ಲಿ, ಪಂಚಾಯತ್ ರಾಜ್‌ಗಳಲ್ಲಿ ಸ್ತ್ರೀಯರಿಗೆ ಮೀಸಲಾತಿ ಸ್ಥಾನಗಳನ್ನು ನಿಗದಿ ಮಾಡುವುದರಲ್ಲಿ ಪೈಪೋಟಿ ನಡೆಸಿದ್ದವು. ಮಹಿಳೆಯರ ಅಭಿವೃದ್ಧಿ ಯೋಜನೆಗಾಗಿ ಸಾಕಷ್ಟು ಹಣ ವಿನಿಯೋಗಿಸುವುದಾಗಿ ಆಶ್ವಾಸನೆ ನೀಡಿದ್ದವು. ಆದರೆ ಚುನಾವಣೆಯ ಕಾವು ಇಳಿವ ಮುನ್ನವೇ ರಾಜಕೀಯ ಶಕ್ತಿಗಳ ಅಮಾನುಷ ಆಟ ಪ್ರಾರಂಭವಾಗಿತ್ತು. ತೆಲುಗುದೇಶಂ ಮತ್ತು ಸಿ.ಪಿ.ಎಂ. ಪಕ್ಷಗಳಿಗೆ ಬೆಂಬಲ ನೀಡಿದರೆಂದು ಆಂಧ್ರ ಪ್ರದೇಶದ ನಲ್ಗೊಂಡಾ ಜಿಲ್ಲೆಯ ಆದಿವಾಸಿಗಳ ಮೇಲೆ ಕಾಂ(ಐ) ಬೆಂಬಲಿಗರು ದಾಳಿ ಮಾಡಿದ್ದರು. ಈ ಘಟನೆ ಆಕಸ್ಮಿಕವೂ ಅಲ್ಲ; ಪ್ರಥಮವೂ ಅಲ್ಲ. ಪ್ರತಿಷ್ಠಿತ ಲೋಕಸಭಾ ಸ್ಥಾನವಾದ ಫತೇಪುರದ ಗ್ರಾಮವೊಂದರಲ್ಲಿ ಹರಿಜನ ಮಹಿಳೆಯ ಜೀವಂತ ದಹನ ಹೀಗೆ,........

ಯಾರಿಗೇ ಅನ್ಯಾಯವಾದರೂ ಕಿವುಡಾಗಿರುವ ಸರ್ಕಾರ ಸ್ತ್ರೀಯರು ಬಲಿಪಶುಗಳಾಗಿದ್ದರೂ ಅದೇ ಅನಾಸ್ಥೆ ತೋರುತ್ತದೆ. ವಿರೋಧ ಪಕ್ಷಗಳು ಈ ವಿರುದ್ಧ ದನಿಯೆತ್ತುವುದು ಸ್ತ್ರೀಯರ ವ್ಯಕ್ತಿತ್ವದ ಕಾಳಜಿ, ರಕ್ಷಣೆಗಾಗಿ ಅಲ್ಲ, ಓಟಿನಾಸೆಗೆ—ಒಂದೆರಡು ದಿನ ಕೂಗಾಡಿ, ತಮ್ಮ ಆತಂಕ ಪ್ರದರ್ಶಿಸಿ ಸರ್ಕಾರ ತನಿಖೆಗೆ ಆಜ್ಞಾಪಿಸಿದ ಮೇಲೆ ತಣ್ಣಗಾಗುತ್ತವೆ. ಆದರೆ ಈವರೆಗೆ ಎಷ್ಟು ತನಿಖಾ ವರದಿಗಳು ನಮ್ಮೆದುರಿಗೆ ಬಂದಿವೆ? ಅವುಗಳ ಆಧಾರದ ಮೇಲೆ ಸ್ತ್ರೀಯರ ಭದ್ರಗಾಗಿ ಕೈಗೊಂಡ ಕ್ರಮಗಳೇನೆಂದು ಪರಾಮರ್ಶಿಸಿದರೆ ಪಕ್ಷಗಳ ರಾಜಕೀಯ ಬಣ್ಣ ಬಯಲಾಗುತ್ತದೆ. ನಿಜವಾದ ಕಾಳಜಿ ಹೊಂದಿದವರಿಲ್ಲವಾದ್ದರಿಂದ ಪ್ರತಿವರ್ಷವೂ ದೌರ್ಜನ್ಯಗಳ ಸಂಖ್ಯೆ "ಪ್ರಗತಿ"ಯಾಗುತ್ತಿದೆ. ಹಿತಾಸಕ್ತಿಗಳ ಆಕ್ಟೋಪಸ್ ಹಿಡಿತ ನ್ಯಾಯಾಲಯಗಳಿಗೂ ವಿಸ್ತರಿಸಿರುವುದರಿಂದ ಸ್ವತಂತ್ರ ಭಾರತದ ಮಹಿಳೆಗೆ ನ್ಯಾಯ–"ಕನಸಿನ ಗಂಟು".

# ದ. ಆಫ್ರಿಕಾದ ಲೇಖಕಿ ಮಿರಿಯಮ್ ಟ್ಲ್ಯಾಲಿ

ಮಿರಿಯಮ್ ಟ್ಲ್ಯಾಲಿ ಸಂಸ್ಕೃತಿಯನ್ನು ಬದುಕಿನ ಭಾಗವಾಗಿ ನೋಡುತ್ತಾರೆ. ಅಂದರೆ ಇದು ಬದುಕುವ ವಿಧಾನ ಸಹ. ಪ್ರತಿನಿತ್ಯ ಬದುಕಿಗಾಗಿ ಹೋರಾಡುತ್ತಾ ಬರವಣಿಗೆಯಲ್ಲಿ ತೊಡಗಬೇಕೆಂದರೆ ಮಹಿಳೆಯರಿಗೆ ಅನೇಕ ಸಮಸ್ಯೆಗಳಿರುತ್ತವೆ ಎಂದು ಇವರು ಅಭಿಪ್ರಾಯ ಪಡುತ್ತಾರೆ. ಬರವಣಿಗೆಗೆ ಬೇಕಾದ ಗ್ರಂಥಾಲಯಗಳಿದ್ದರೂ ಅವು ಕಪ್ಪು ಮಹಿಳೆಯರಿಗೆ ಲಭ್ಯವಿಲ್ಲ. ಈ ಗ್ರಂಥಾಲಯಗಳು ಬಿಳಿಯರು ವಾಸಿಸುವ ಪ್ರದೇಶಗಳಲ್ಲಿರುತ್ತವೆ. ಬಿಳಿಯ ಹಾಗೂ ಕರಿಯ ಹೆಂಗಸರ ಬದುಕಿನಲ್ಲಿ ಭಿನ್ನವಾದ ಚಾಲನೆಗಳಿವೆ. ರಾಜಕೀಯ ವ್ಯವಸ್ಥೆಯ ಎಲ್ಲಾ ಮುಖಗಳಿಂದಲೂ ಕಪ್ಪು ಹೆಂಗಸರು ತುಳಿತಕ್ಕೆ ಒಳಗಾಗಿದ್ದಾರೆ. ಆದರೆ ಬಿಳಿಯ ಸ್ತ್ರೀಯರು ಅನೇಕ ಸವಲತ್ತುಗಳನ್ನು ಹೊಂದಿರುತ್ತಾರೆ. ಹಾಗೆ ಹೋಲಿಸಿದಲ್ಲಿ ಕಪ್ಪು ಹೆಂಗಸು | ಗಂಡಸು ಇಬ್ಬರ ಸ್ಥಿತಿಯೂ ಒಂದೇ ಆಗಿರುತ್ತದೆ. ಆದರೆ ಕಪ್ಪು ಹೆಂಗಸು ಬದುಕಿಗಾಗಿ ಹೊರಗಡೆ ದುಡಿಯಬೇಕಾದುದಲ್ಲದೇ ಮನೆಯ ಎಲ್ಲಾ ಕೆಲಸವನ್ನೂ ನೋಡಿಕೊಳ್ಳಬೇಕಾಗುತ್ತದೆ. ಹಾಗಾಗಿ ಆಕೆಗೆ ಸಮಯ ಕಡಿಮೆ. ಕರಿಯ ಪುರುಷರು ಮನೆಗೆಲಸ ಮಾಡುವುದು ಬಹಳ ವಿರಳ. ಹಾಗಾಗಿ ಪುರುಷ ಲೇಖಕರಿಗಿರುವ ಸಮಯ ಸ್ತ್ರೀ ಲೇಖಕಿಯರಿಗೆ ದೊರೆಯುವುದಿಲ್ಲ. ಹಾಗಾಗಿ ಸ್ತ್ರೀ ಲೇಖಕಿಯರ ಸಂಖ್ಯೆ ಕೂಡಾ ಕಡಿಮೆ.

ಸ್ತ್ರೀಯರೂ ವಿದ್ಯಾಭ್ಯಾಸ ಪಡೆದಿದ್ದರೂ ಇದು ಕೆಲವು ಭಿನ್ನ ಆಸಕ್ತಿಗಳ ಮೇಲೆ ಒತ್ತು ಹಾಕುವಂತಹ ವಿದ್ಯಾಭ್ಯಾಸವಾಗಿರುತ್ತದೆ. "ಸೇವೆ"ಗೆ ತಕ್ಕಂತಹ ಕೆಲಸಗಳ ಮೇಲೆ ಒತ್ತು ಹಾಕಿ ಸ್ತ್ರೀಯರ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸಲಾಗುತ್ತದೆ. ವೈದ್ಯಕೀಯ, ಕಾನೂನು, ಅಥವಾ ತಾಂತ್ರಿಕ ವಿಚಾರಗಳಲ್ಲಿ ವಿದ್ಯಾಭ್ಯಾಸ ಪಡೆಯಲು ಇವರಿಗೆ ಅವಕಾಶಗಳು ಕಡಿಮೆ. ಈ ಸ್ಥಿತಿಗೆ ಕಪ್ಪು ಜನಾಂಗದ ಪುರುಷರು ಹೊರತಾಗಿಲ್ಲ.

---

ಸೋವೆಟೋನಲ್ಲಿ ಅಡಿಗೆ ಸಾರ್ವಜನಿಕ ಮನೆ ಮನೆಗೆ ಮಾರಿ ಜೀವನ ನಡೆಸುತ್ತಿದ್ದ ಈಕೆ ಬರೆಯುವುದಕ್ಕೆ ತನ್ನ ಸಾಯಂಕಾಲದ ಬಿಡುವಿನ ಸಮಯ ಬಳಸಿಕೊಂಡು ಲೇಖಕಿಯಾದವರು. ದ: ಆಫ್ರಿಕಾದ ಪತ್ರಿಕೆಗಳಲ್ಲಿ ಕೆಲವು ಸಣ್ಣ ಕತೆಗಳನ್ನು ಹಾಗೂ ಕಾದಂಬರಿಗಳನ್ನು ಇವರು ಬರೆದು ಪ್ರಕಟಿಸಿದ್ದಾರೆ. ಇವರ ಕಾದಂಬರಿಗಳಾದ ಮ್ಯೂರಿಯಲ್ ಎಟ್ ಮೆಟ್ರೋಪಾಲಿಟನ್ (೧೯೭೫) ಮತ್ತು "ಅಮಂಡಲ" (೧೯೮೦) ದ. ಆಫ್ರಿಕಾದಲ್ಲಿ ನಿಷೇಧಿಸಲ್ಪಟ್ಟಂತಹ ಕೃತಿಗಳು. ಅವರ ಅನೇಕ ಸಣ್ಣಕತೆಗಳೂ ಸಹ ಹೀಗೆಯೇ ನಿಷೇಧಿಸಲ್ಪಟ್ಟಿವೆ. ಮಿನೆಕೆ ಸ್ಕಿಪರ್ ಸಂಪಾದಿಸಿದ "ಅನ್ ಹರ್ಡ್ ವರ್ಡ್ಸ್" ಪುಸ್ತಕದಲ್ಲಿ ಮಿರಿಯಮ್ ಟ್ಲ್ಯಾಲಿ ನೀಡಿದ ಸಂದರ್ಶನದಿಂದ ಈ ಕೆಳಗಿನ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿದೆ.

---

ದಕ್ಷಿಣ ಆಫ್ರಿಕಾದಲ್ಲಿ ಸ್ತ್ರೀಯರು ಯಾವಾಗಲೂ ಕಥೆಗಾರರಾಗಿದ್ದಾರೆ. ಮಕ್ಕಳು ಅಜ್ಜಿಯರ ಸುತ್ತ ಕುಳಿತು ಕಥೆ ಕೇಳುವುದು ತೀರಾ ಸಾಮಾನ್ಯ ಸಂಗತಿಯಾಗಿತ್ತು. ಆದರೆ ಕೈಗಾರಿಕೋದ್ಯಮ ಬೆಳೆದ ಹಾಗೆ ಸ್ತ್ರೀಯರೂ ಹೊರಗಡೆ ದುಡಿದು ಸಂಪಾದಿಸುವುದು ಅನಿವಾರ್ಯವಾಗಿದೆ. ಹೀಗೆ ಹೊರಗೆ ದುಡಿಯುವ ಸ್ತ್ರೀಯರು ಕಡಿಮೆ ಸಮಯ ಹೊಂದಿರುತ್ತಾರೆ, ಜೊತೆಗೆ ಬರವಣಿಗೆಗೆ ಬೇಕಾದ ಶಾಂತವಾದ ವಾತಾವರಣವೂ ಇವರಿಗೆ ಇರುವುದಿಲ್ಲ. ಕಥೆಗಾರರಾಗಲು ಅಗತ್ಯವಾದ ಅದ್ಭುತವಾದ ಕಾಲ್ಪನಿಕ ಶಕ್ತಿಯನ್ನು ಹೊಂದಿರುವ ಹೆಂಗಸರು ಅದನ್ನು ವೃದ್ಧಿಪಡಿಸಿಕೊಳ್ಳಲು ಪ್ರಯತ್ನಿಸುವುದಿಲ್ಲ. ಈಗಿನ ಮಕ್ಕಳು ಟಿ.ವಿ.

ಯಿಂದಾಗಿ ಕಥೆ ಕೇಳುವುದು ಇಲ್ಲ. ಅಜ್ಜಿಯಂದಿರ
ಕಥೆಗಳನ್ನು ಈಗಿನ ಜನಾಂಗದವರು ಸಂಗ್ರಹಿಸಿದರೆ
ಒಳ್ಳೆಯದು ಹಾಗಿಲ್ಲದಿದ್ದರೆ ಹಿಂದಿನ ತಲೆಮಾರಿನೊಂ
ದಿಗೆ ಈ ಕಲೆ ಹೊರಟು ಹೋಗುತ್ತದೆ. ಇದಕ್ಕಾಗಿ
ಮಿರಿಯಮ್ ಟ್ಲ್ಯಾಲಿ ಇತರ ಲೇಖಕಿಯರೊಡನೆ
ಸೇರಿ ಈ ಹಂತದಲ್ಲಿ ಕೆಲಸ ಮಾಡುತ್ತಿದ್ದಾರೆ ಇಂತಹ
ಕೆಲಸ ಮಾಡುವುದಕ್ಕೂ ಸಾಕಷ್ಟು ಸಮಯ ಇರುವು
ದಿಲ್ಲ ಎಂಬುದು ಇವರ ಅಭಿಪ್ರಾಯ.

ದಕ್ಷಿಣ ಆಫ್ರಿಕಾದಲ್ಲಿ ಮಹಿಳೆಯರು ಹೆಚ್ಚಾಗಿ
ಸಣ್ಣ ಕತೆಗಳು ಕವನಗಳನ್ನು ಬರೆಯುತ್ತಾರೆ.
ಏಕೆಂದರೆ ಸಣ್ಣ ಕತೆ | ವನಗಳಿಗೆ ಹೆಚ್ಚು ಸಮಯ
ಬೇಕಾಗುವುದಿಲ್ಲ. ಕತೆಯಲ್ಲಿ ವಿಚಾರವಿದ್ದು ಅದು
ಸ್ವಲ್ಪ ಸ್ಪಷ್ಟವಾಗಿದ್ದರೆ ಅದನ್ನು ಬರೆದು ಮುಗಿಸುವು
ದಕ್ಕೆ ಹೆಚ್ಚು ಸಮಯ ಬೇಡ. ಸಾಮಾನ್ಯವಾಗಿ
ಸ್ತ್ರೀಯರು ಒಂದು ಕಾದಂಬರಿಯನ್ನೂ ಬರೆದು ಪ್ರಕಟಿ
ಸುವುದಿಲ್ಲ. ಕೇವಲ ಪತ್ರಿಕೆಗಳಲ್ಲಿ ಮಾತ್ರ ಬರೆ
ಯುತ್ತಾರೆ. ಪುಸ್ತಕ ತರುವುದಕ್ಕೆ ಬೇಕಾಗುವ ಸವಲ
ತ್ತುಗಳಾಗಲೀ ಅಥವಾ ಸಂಪರ್ಕಗಳಾಗಲೀ ಇವರಿಗೆ
ಇರುವುದಿಲ್ಲ. ೧೯೭೫ರಲ್ಲಿ ಈಕೆಯ ಪ್ರಥಮ ಕಾದಂ
ಬರಿ ಸೋವೆಟೋನಲ್ಲಿ ಪ್ರಕಟವಾಯಿತು. ಈ ಸಂದ
ರ್ಭದಲ್ಲಿ ಈಕೆ ತಮ್ಮ ಕೆಲಸ ಬಿಡಬೇಕಾಗಿ ಬಂತು.
ಈಕೆಯ ಅತ್ತೆಗೆ ಹುಷಾರಿರಲಿಲ್ಲ. ೪ ವರ್ಷಗಳ ಕಾಲ
ಮಿರಿಯಮ್ ಟ್ಲ್ಯಾಲಿ ಆಕೆಯ ಸೇವೆ ಮಾಡಿದರು.
ಈ ಸಂದರ್ಭದಲ್ಲಿಯೇ ಈಕೆ ತಮ್ಮ ಪ್ರಥಮ ಕಾದಂ
ಬರಿಗಾಗಿ ಕೆಲಸ ಮಾಡಿದರು. ಈ ಕಾದಂಬರಿ ೫
ವರ್ಷಗಳ ಕಾಲ ಪ್ರಕಟಗೊಂಡಿರಲಿಲ್ಲ. ಪ್ರಕಾಶಕ
ರು ಕಾದಂಬರಿಯಲ್ಲಿ ಕೆಲವು ಬದಲಾವಣೆಗಳನ್ನು ಮಾ
ಡಲು ಸಲಹೆ ಇತ್ತರು. ಏಕೆಂದರೆ ಆ ಕಾದಂಬರಿ
ನಿಷೇಧಿಸಲ್ಪಡಬಹುದೆಂಬುದು ಅವರ ನಿರೀಕ್ಷೆಯಾ
ಗಿತ್ತು. ದೀರ್ಘ ಕಾಲ ಮಿರಿಯಮ್ ಟ್ಲ್ಯಾಲಿ ಇದಕ್ಕೆ
ಒಪ್ಪಿಗೆ ಕೊಡಲಿಲ್ಲ. ಆದರೆ ಒಂದು ದಿನ ಈಕೆಯ
ತಾಯಿ ಬಹುಶಃ ತಮ್ಮ ಮಗಳ ಪುಸ್ತಕ ಪ್ರಕಟ
ವಾದುದನ್ನು ನೋಡಲು ತಾವು ಬದುಕಿರುವುದಿಲ್ಲ
ಎಂದು ವ್ಯಥೆಪಟ್ಟರು. ಆಗ ಮಿರಿಯಮ್ ಟ್ಲ್ಯಾಲಿ
ಪುಸ್ತಕದಲ್ಲಿ ಕೆಲವು ಸೆನ್ಸಾರ್ ಮಾಡಿ ಬದಲಾವಣೆ
ಮಾಡಲು ಒಪ್ಪಿಕೊಂಡರು. ಇದಾದ ನಂತರ ಕೆಲವು
ವರ್ಷಗಳಲ್ಲಿ ಅಂತರ್ ರಾಷ್ಟ್ರೀಯ ಕೇವನ್ ಪ್ರೆಸ್‌ನ

ವರು ಸೆನ್ಸಾರ್ ಆಗದ ಮೂಲ ಪ್ರತಿಯ ಎರಡನೆಯ
ಮುದ್ರಣ ಮಾಡಿದರು. ಈ ಎರಡನೇ ಮುದ್ರಣದ
"ಮ್ಯೂರಿಯಲ್ ಎಟ್ ಮೆಟ್ರೋಪಾಲಿರ್ಟ" ಬಂದ
ಮೇಲೆ ಈ ಕಾದಂಬರಿ ಸಂಪೂರ್ಣವಾಗಿ ದ. ಆಫ್ರಿಕಾ
ದಲ್ಲಿ ನಿಷೇಧಿಸಲ್ಪಟ್ಟಿತು. ಈ ನಂತರದ ದಿನಗಳಲ್ಲಿ
ಮಿರಿಯಮ್ ಬರಹಕ್ಕಾಗಿಯೆ ತಮ್ಮನ್ನು ಅರ್ಪಿಕೊಳ್ಳಲು
ತೀರ್ಮಾನಿಸಿದರು. ಜೊತೆಗೆ ಹೆಚ್ಚು ಹೆಚ್ಚಾಗಿ ಸಾರ್ವ
ಜನಿಕವಾಗಿ ಮಾತನಾಡುವುದನ್ನೂ ಸಹ ಕಲಿತರು.

"ಅಮಂಡಲು" ಕಾದಂಬರಿ ಬರೆದು ಈಕೆ
ಅದನ್ನು ಪ್ರಕಟಿಸಿದಾಗ ದಕ್ಷಿಣ ಆಫ್ರಿಕಾದ ರಾಜಕೀಯ
ದಲ್ಲಿ ಬಹಳಷ್ಟು ಘರ್ಷಣೆ ನಡೆಯುತ್ತಿದ್ದವು. ದಕ್ಷಿಣ
ಆಫ್ರಿಕಾದ ರಾಜಕೀಯದ ಕ್ರೈಸಿಸ್‌ನ ಸಮಯದಲ್ಲಿ
೧೯೭೬ ರಲ್ಲಿ ಸೋವೆಟೋನಲ್ಲಿ ನಡೆದ ರಾಜಕೀಯ
ಸಂಗತಿಗಳನ್ನು ಕುರಿತದ್ದಾಗಿತ್ತು. "ಮ್ಯೂರಿ
ಯಲ್ ಎಟ್ ಮೆಟ್ರೋಪಾಲಿಟನ್" ಕಾದಂಬರಿ
ಯನ್ನು ನಿಷೇದಿಸುವುದಕ್ಕೆ ಮೊದಲು ಪ್ರಿಟೋ
ರಿಯನ್‌ನ ಬಿಳಿಯ ಅಧಿಕಾರಿಗಳಿಂದ ಈಕೆಗೆ
ಒಂದು ಪತ್ರ ಬಂದಿತು ಅವರು ಆಫ್ರಿಕನ್ ಭಾಷೆಯ
ಲ್ಲಿ ಬರೆದಿದ್ದರು "ಮಿರಿಯಮ್ ನಿಮ್ಮ ಪುಸ್ತಕ ನಾವು
ಓದಿದ್ದೇವೆ. ಆದರೆ ಸಂಗತಿಗಳು ನೀವು ಚಿತ್ರಿಸಿದಷ್ಟು
ಕೆಟ್ಟದಾಗಿಲ್ಲ, ಸ್ಥಿತಿ ಅಷ್ಟೊಂದು ಭೀಕರವಾಗಿಲ್ಲ."
ಅದು ಅವರ ಅಭಿಪ್ರಾಯವಾಗಿತ್ತು.

"ಮ್ಯೂರಿಯಮ್ ಎಟ್ ಮೆಟ್ರೋಪಾಲಿರ್ಟ"
ಗಿಂತ ಅಮಂಡಲ ಹೆಚ್ಚು ರಾಜಕೀಯವಾದ ಕಾದಂ
ಬರಿ. ಮತ್ತೊಮ್ಮೆ ಈಕೆಯ ಪ್ರಕಾಶಕರು ಬೇರೆ
ಶೀರ್ಷಿಕೆ ಕೊಡುವಂತೆಯೂ ಹಾಗು ಹಲವಾರು ಬದ
ಲಾವಣೆಗಳನ್ನು ಮಾಡುವಂತೆಯೂ ಮತ್ತೆ ಸಲಹೆ
ಇತ್ತರು. ಈಕೆ ತಿರಸ್ಕರಿಸಿದರು. ಈ ಪುಸ್ತಕ ತಕ್ಷಣ
ದಲ್ಲಿಯೇ ನಿಷೇಧಿಸಲ್ಪಟ್ಟಿತು. ನಿಷೇಧಿಸಲ್ಪಡುವು
ದಕ್ಕೆ ಮೊದಲೇ ಇದರ ೫೦೦೦ ಪ್ರತಿಗಳು ಮಾರಾಟ
ವಾಗಿಬಿಟ್ಟಿದ್ದವು. "ಅಮಂಡಲಾ" ಎಂದರೆ ಅಧಿ
ಕಾರ ಎಂದು ಅರ್ಥ. ದ. ಆಫ್ರಿಕಾದಲ್ಲಿ "ಅಮಂ
ಡಲಾ ನಗವೆಟು" ಇದನ್ನು ಘೋಷಣೆಗಾಗಿ ಬಳ
ಸುತ್ತಾರೆ. ಇದು ಪ್ರತಿ ವಿರೋಧದ ಚಿಹ್ನೆಯಾಗಿದೆ.
ಈ ಶೀರ್ಷಿಕೆ ಸೆನ್ಸಾರ್ ಮಂಡಳಿಗೆ ಎಚ್ಚರಿಕೆಯ ಘಂಟೆ
ಯಾಯಿತು.

ಈಕೆ ಲೇಖಕಿಯಾಗಿ ರೂಪುಗೊಂಡಾಗ ಈಕೆಗೆ ವಿದೇಶಕ್ಕೆ ಪ್ರಯಾಣ ಮಾಡುವ ಅವಕಾಶ ದಕ್ಕಿತು. ಈ ವಿದೇಶದ ಪ್ರಯಾಣ ಆಕೆಗೆ ಅನೇಕ ಸಂಗತಿಗಳನ್ನು ಕಲಿಸಿತು. ದ. ಆಫ್ರಿಕಾದಲ್ಲಿ ಸ್ತ್ರೀಯರೆಷ್ಟು ಪ್ರತ್ಯೇಕವಾಗಿ ಬದುಕುತ್ತಿದ್ದಾರೆ ಎಂಬುದು ಈಕೆಯ ಮನಸ್ಸಿಗೆ ಆಳವಾಗಿ ನೆಟ್ಟ ಸಂಗತಿ. ಲೋವಾದಲ್ಲಿ ಅಂತರರಾಷ್ಟ್ರೀಯ ಶಿಬಿರವೊಂದರಲ್ಲಿ ಈಕೆ ಭಾಗವಹಿಸಿದರು. ಇದರಲ್ಲಿ ಪ್ರಪಂಚದ ಬೇರೆ ಬೇರೆ ಕಡೆಯಿಂದ ಬರಹಗಾರರು ಬಂದಿದ್ದರು. ಈ ಭಾಗವಹಿಸುವಿಕೆ ಈಕೆಗೊಂದು ಅದ್ಭುತವಾದ ಅನುಭವವಾಗಿತ್ತು. ಈ ಸಂಪರ್ಕಗಳೆಲ್ಲ ಈಕೆಗೆ ಸ್ಫೂರ್ತಿದಾಯಕವಾಗಿತ್ತೆಂದು ಈಕೆ ನುಡಿಯುತ್ತಾರೆ.

ದ. ಆಫ್ರಿಕಾದಲ್ಲಿ ದುಡಿಯುವ ಅಥವಾ ಇತರೇ ವರ್ಗದ ಸಾಹಿತ್ಯವೆಂದು ಪ್ರತ್ಯೇಕಿಸಲ್ಪಟ್ಟಿಲ್ಲ. ಅಧಿಕಾರಿ ವರ್ಗದಿಂದ ಪುರುಷ | ಸ್ತ್ರೀಯರೆಲ್ಲರೂ ಶೋಷಣೆಗೊಳಪಟ್ಟವರೇ. ಈಗ ಅಧಿಕಾರ ವರ್ಗದವರು ಕಪ್ಪು ಜನಾಂಗದಲ್ಲಿ ಮಧ್ಯಮ ವರ್ಗವೊಂದನ್ನು ಸೃಷ್ಟಿಸಲು ಪ್ರಯತ್ನಿಸುತ್ತಿದ್ದಾರೆ.

ಈಕೆ ದೇಶವನ್ನು ಬಿಟ್ಟು ಬದುಕಲು ಎಂದೂ ಇಚ್ಛಿಸಿದವಲ್ಲ. ತಮ್ಮ ದೇಶದಲ್ಲಿಯೇ ಇದ್ದು ಬರೆಯುವುದು ಈಕೆಯ ರಾಜಕೀಯ ಆಯ್ಕೆಯಾಗಿದೆ. ದ. ಆಫ್ರಿಕ ಬಿಡುವುದೆಂದರೆ ತಮ್ಮ ಭೂಮಿ ತೊರೆದ ಹಾಗೆ ಹಾಗೂ ತಮ್ಮ ಬೇರುಗಳನ್ನು ತಾವೇ ಕತ್ತರಿಸಿಕೊಂಡ ಹಾಗೆ ಎಂಬುದು ಈಕೆಯ ನಿಲುವು. ರಾಜಕೀಯ ಹಿಂಸೆಗಳು ನಡೆದಾಗ ಈ ಮಧ್ಯೆ ಇದ್ದು ಆ ಹಿಂಸೆಯನ್ನು ಅನುಭವಿಸುವುದು ತಾವು ತಮ್ಮ ಜನಕ್ಕೆ ಸೇರಲ್ಪಟ್ಟವಳು ಎಂಬುದನ್ನು ದೃಢಪಡಿಸುತ್ತದೆ ಎಂದು ಈಕೆ ನುಡಿಯುತ್ತಾರೆ. ದೇಶ ಬಿಟ್ಟು ಬೇರೆ ದೇಶದಲ್ಲಿ ಆಶ್ರಿತರಾಗಿದ್ದು ತಮ್ಮ ಜನಸಂಪರ್ಕ ಕಡಿದುಕೊಳ್ಳುವುದಕ್ಕೆ ಈಕೆ ಇಷ್ಟ ಪಡುವುದಿಲ್ಲ.

ದ. ಆಫ್ರಿಕಾದಲ್ಲಿ ಪಲಾಯನವಾದಿ ಸಾಹಿತ್ಯಕ್ಕೆ ಕಪ್ಪು ಜನಾಂಗದ ಅನುಭವದಲ್ಲಿ ಜಾಗವಿಲ್ಲ. ಈ ರೀತಿಯ ಸಾಹಿತ್ಯವನ್ನು ಬಿಳಿಯರು ಸೃಷ್ಟಿಸುತ್ತಾರೆ. ಮಕ್ಕಳ ರೀತಿಯ ಈ ಸಾಹಿತ್ಯ ಸಾಮೂಹಿಕವಾಗಿ ಯಾವ ಪ್ರಭಾವವನ್ನೂ ಬೀರುವುದಿಲ್ಲ ಎಂದು ಮಿರಿಯಮ್‌ರವರ ಅಭಿಪ್ರಾಯ. ದ. ಆಫ್ರಿಕಾದ ರಾಜಕೀಯ ಪರಿಸ್ಥಿತಿಯಿಂದಾಗಿ ಬಿಳಿಯರಿಗಿಂತ ಕರಿಯರು ಹೆಚ್ಚು ಬೇಗ ಪ್ರಬುದ್ಧರಾಗಬೇಕಾಗುತ್ತದೆ. ರೋಚಕವಾದ ಕನಸುಗಳಿಗೆ ಸಮಯವಿಲ್ಲದ ಸ್ಥಿತಿ ಕಪ್ಪು ಜನಾಂಗದ್ದು. ಪ್ರತಿಯೊಬ್ಬ ಕರಿಯ ಜನಾಂಗದ ವ್ಯಕ್ತಿಯೂ ಈ ಜಗತ್ತಿನ ಬಗ್ಗೆಯೇ ಯೋಚಿಸಬೇಕಾಗುತ್ತದೆ. ಹಾಗಾಗಿ ಪಲಾಯನವಾಗುವ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಪಲಾಯನವಾದಿ ಸಾಹಿತ್ಯ ಕರಿಯರಿಂದ ರಚಿತವಾಗಿಲ್ಲ.

ಮಿರಿಯಮ್ ಟ್ಲ್ಯಾಲಿ ತಮ್ಮ ಕೃತಿಗಳಲ್ಲಿ ಸ್ತ್ರೀತ್ವದ ವಿವಿಧ ಮುಖಗಳನ್ನು ಬಿಂಬಿಸಲು ಪ್ರಯತ್ನಿಸಿದ್ದಾರೆ. ಅವರ ಬರಹದ ಹರವು ಅವರ ಜೊತೆಗಿನ ಇತರೇ ಮಹಿಳೆಯರ ಅನುಭವಗಳನ್ನು ಒಳಗೊಂಡುದುದಾಗಿದೆ. ಇವರು ಮಹಿಳೆಯರ ಪಾತ್ರಗಳನ್ನು ಆದರ್ಶೀಕರಿಸುವುದಿಲ್ಲ. ಇವರ ಕೃತಿಗಳಲ್ಲಿನ ಮಹಿಳೆಯರು ಅತಿ ಮಾನುಷರೂ ಅಲ್ಲ. ಇವರ ಎಲ್ಲಾ ನಾಯಕಿಯರು ಮನೆಯಲ್ಲಿ "ತಾಯಿಯಾಗಿರುವ" ಅಥವಾ "ಮನೆಯೊಡತಿ" ಯಾಗಿರುವ ಸಂಕೇತಗಳಿಂದ ಭಿನ್ನರಾದವರು. ಅದೇ ರೀತಿ ಪ್ರತಿರೋಧದ ಸಂಕೇತಗಳಿಂದ ಕೂಡಿದವರಾಗಿರುತ್ತಾರೆ. ಹೀಗೆ ಮಿರಿಯಮ್ ಟ್ಲ್ಯಾಲಿಯವರ ಕೃತಿಯ ನಾಯಕಿಯರು ಇಬ್ಬಗೆಯ ಬದುಕನ್ನು ಪ್ರತಿನಿಧಿಸುತ್ತಾರೆ. ತಾಯ್ತನ ಹಾಗೂ ಸ್ವತಂತ್ರ್ಯ ಪ್ರವೃತ್ತಿಯನ್ನು ಒಟ್ಟಾಗಿ ಪ್ರತಿನಿಧಿಸುತ್ತಾರೆ. "ಅಮುಂಡಲ" ದಲ್ಲಿ ಬರುವ ನಾಯಕಿಯರು ದುರ್ಬಲ ಅಥವಾ ಗುಲಾಮೀತನದ ಪಾತ್ರಗಳಲ್ಲ. ಅವರು ಬರೀ ಮನೆಯಲ್ಲಿ ಕುಳಿತು ಕಾಲ ಕಳೆಯುವವರಲ್ಲ. ಪುರುಷರು ಏನು ಹೇಳುತ್ತಾರೋ ಅದನ್ನು ಪ್ರಶ್ನೆ ಮಾಡದೇ ಒಪ್ಪಿಕೊಳ್ಳುವವರಲ್ಲ.

ಇವರ ಮಹಿಳೆಯರು ಹೋರಾಟ ಪ್ರವೃತ್ತಿಯವರು. ಇವರು ಮಾತನಾಡುವ ರೀತಿ ಪುರುಷ ಪಾತ್ರಗಳಿಂದ ಒಪ್ಪಿಗೆ ಪಡೆಯುವುದಿಲ್ಲ. ತಾಯ್ತನ ಹಾಗೂ ಹೋರಾಟದ ಬದುಕಿನ ಎಳೆಗಳನ್ನು ಕೂಡಿಸಿದಾಗ ಸೃಷ್ಟಿಯಾಗುವ ಪಾತ್ರಗಳ ಹಿನ್ನಲೆಯಲ್ಲಿ ಹುಟ್ಟುವ ಸಮಸ್ಯೆಗಳ ಚಿತ್ರಣ ದಕ್ಷಿಣ ಆಫ್ರಿಕಾದ ಸ್ತ್ರೀ ಸಮೂಹಕ್ಕೆ ನವೀನವಾದ ಅನುಭವಗಳು. ರಾಜಕೀಯ ಹೋರಾಟವನ್ನು, ಅಂಗಿಗಳನ್ನು ಇಸ್ತ್ರಿ ಮಾಡುವ

ದರೊಂದಿಗೆ ಕಾಲುಚೀಲಗಳನ್ನು ಒಗೆಯುವುದರೊಂದಿಗೆ ಕೂಡಿಸಿ ಬದುಕುವುದು ಹೇಗೆ ಎಂಬುದು ಮಹಿಳೆಯರಿಗೆ ಚೆನ್ನಾಗಿ ಗೊತ್ತು ಎಂದು ಮಿರಿಯಂ ಟ್ಲ್ಯಾಲಿ ನುಡಿಯುತ್ತಾರೆ. ಹೀಗಾಗಿ ಮಹಿಳೆಯರು ವಸ್ತುಗಳನ್ನು ಗ್ರಹಿಸುವ ಬಗೆ ಈ ಅನುಭವಗಳಲ್ಲಿಯೇ ಬೇರು ಬಿಟ್ಟಿದ್ದಾಗಿರುತ್ತದೆ.

ಕಪ್ಪು ಹೆಂಗಸರಿಗೆ ನಿಜವಾದ ಸಮಸ್ಯೆ ಎಂದರೆ ಬಿಳಿಯರೊಂದಿಗೆ ಒಪ್ಪಂದ ಮಾಡಿಕೊಂಡು ಬದುಕುವುದು. ಈ ಬಗ್ಗೆ ಸುಮಾರಾಗಿ ಯಾರೂ ಹೊರಗೆ ಮಾತನಾಡುವುದಿಲ್ಲ. ಜೊತೆಗೆ ಯಾರೂ ಬರೆಯುವುದಿಲ್ಲ. ಈ ರೀತಿಯ ಸಂಗತಿಗಳು ಪ್ರತಿ ನಿತ್ಯ ನಡೆಯುತ್ತಿರುತ್ತವೆ. ದ. ಆಫ್ರಿಕಾದಲ್ಲಿ ಸಾಕಷ್ಟು ಮಹಿಳೆಯರು — ಮಿರಿಯಂ ಟ್ಲ್ಯಾಲಿ ಅವರ ಸಂಬಂಧದಲ್ಲಿಯೇ ಕಪ್ಪು ಮಹಿಳೆಯರು ಬಿಳಿಯ ಮಕ್ಕಳನ್ನು ತಮ್ಮ ಬೆನ್ನ ಮೇಲೆ ಎತ್ತಿಕೊಂಡು ಓಡಾಡುತ್ತಿರುತ್ತಾರೆ. ಆದರೆ ಈ ಬಗ್ಗೆ ಯಾರೂ ಮಾತನಾಡುವುದಿಲ್ಲ ಈ ಕಥಾವಸ್ತುವನ್ನು ಒಳಗೊಂಡಿರುವುದು "ಜೆಸ್ಟ್ ದಿ ಟು" ಸಣ್ಣ ಕಥೆ. ಈ ಕತೆ ಕೂಡಾ ದ. ಆಫ್ರಿಕಾದಲ್ಲಿ ನಿಷೇಧಿಸಲ್ಪಟ್ಟಿದೆ.

ಇದನ್ನು ಮಿರಿಯಂ ಟ್ಲ್ಯಾಲಿ ಲೋವಾದಲ್ಲಿ ಓದಿದಾಗ ಅಲ್ಲಿಗೆ ಕ್ಯಾಮರೂನ್, ಘಾನಾ ಹಾಗೂ ಬೋಟ್ಸ್‌ವಾನಾದಿಂದ ಬಂದಿದ್ದ ಮೂರು ಜನ ಆಫ್ರಿಕನ್ಸ್ ಇದನ್ನು ವಿರೋಧಿಸಿದರು. ಈ ಕತೆಯಲ್ಲಿ ಒಬ್ಬ ರೈಲಿನ ಕಂಡಕ್ಟರ್ ಒಬ್ಬ ಕಪ್ಪು ಹುಡುಗಿಯನ್ನು ಬೆನ್ನಟ್ಟಿ ಹೋಗುತ್ತಾನೆ. ಆ ರೈಲು ಎಲ್ಲಿಯೆಲ್ಲಿಯವರೆಗೆ ಇರುವುದೊ ಅಲ್ಲಿಯವರೆಗೆ ಆಕೆಯನ್ನು ಆತ ಹಿಂಬಾಲಿಸುತ್ತಾ ಹೋಗುತ್ತಾನೆ. ಅನಂತರ ಇಬ್ಬರೂ ಒಂದೇ ಭೋಗಿಯಲ್ಲಿ ಭೇಟ್ಟಿಯಾಗುವ ಸನ್ನಿವೇಶದಲ್ಲಿ ಕತೆ ಮುಗಿಯುತ್ತದೆ. ಈ ದೃಶ್ಯವನ್ನೂ ಮೂರೂ ಜನ ಲೇಖಕರೂ ವಿರೋಧಿಸಿದರು. ಆ ಹುಡುಗ ಸುಮ್ಮನಾಗಿರದಿದ್ದರೆ ಆ ಹುಡುಗಿ ಆತನನ್ನು ಕೊಲೆ ಮಾಡಬೇಕಿತ್ತು ಎಂದು ಆಲೋಚಿಸಿದ್ದರು. ಒಬ್ಬ ಅಪರಿಚಿತ ತಮ್ಮಾವರನ್ನು ಹಾಳು ಮಾಡುತ್ತಾರೆ ಎಂಬುದು ಬಹುಶಃ ಅವರಿಗೆ ನೋವಾದ ಹಾಗೂ ಹೆದರಿಕೆ ಹುಟ್ಟಿಸಿದ ಸಂಗತಿ ಎನಿಸುತ್ತದೆ.

ಈ ರೀತಿ ಕಪ್ಪು ಹೆಂಗಸರನ್ನು ಹಾಳು ಮಾಡುತ್ತಾರೆ ಎಂದು ಕರಿಯ ಜನ ಭಾವಿಸಿದರೆ ಪಾಶ್ಚಾತ್ಯ ದೇಶಗಳಲ್ಲೂ ತಮ್ಮ ಬಿಳಿಯ ಹೆಂಗಸರನ್ನು ಕಂದು | ಕಪ್ಪು ಬಣ್ಣದ ಜನ ಹಾರಿಸಿಕೊಂಡು ಹೋಗುತ್ತಾರೆ ಎಂಬ ಭಾವನೆ ಅವರಲ್ಲೂ ಇದೆ. ಹೆಂಗಸರು "ಆಸ್ತಿ" ಎಂದು ಭಾವಿಸಲ್ಪಟ್ಟಿರುವುದೇ ಇದಕ್ಕೆ ಕಾರಣ. ದ. ಆಫ್ರಿಕಾದ ರಾಜಕೀಯ ಪರಿಸ್ಥಿತಿ ಒಂದು ಹೊಸದಾದ ಸನ್ನಿವೇಶವನ್ನು ಸೃಷ್ಟಿಸುತ್ತದೆ. ಬೋಟ್ಸ್‌ವಾನಾದಿಂದ ಬಂದ ಬರಹಗಾರನೊಬ್ಬ ಮಿರಿಯಂಗೆ ಹೇಳಿದರು: "ಪ್ರತಿ ನಿತ್ಯ ನಾನು ಬಿಳಿಯರು ಗಡಿ ದಾಟಿ ಬರುವುದನ್ನು ಕಾಡುತ್ತೇನೆ. ಬೋಯರ್ಸ್ ನಮ್ಮ ಹುಡುಗಿಯರ ಹತ್ತಿರ ಬರುತ್ತಾರೆ. ಪ್ರತಿ ತಿಂಗಳು ಕೆಲವು ಕಲರ್ಡ್ ಮಕ್ಕಳು ಹುಟ್ಟುತ್ತಾರೆ ಆದರೆ ಮಿರಿಯಮ್ ಅದು ನಮ್ಮಂತಹವರ ಕತೆಗೆ ವಸ್ತುವಾಗಬಾರದು" ಆದರೆ ಮಿರಿಯಮ್ ಯಾಕಾಗಬಾರದು ಎನ್ನುತ್ತಾರೆ. ತಾವು ರೈಲುಗಳಲ್ಲಿ ಭೇಟಿಯಾಗುವ ಸಾಕಷ್ಟು ಹುಡುಗಿಯರು ತಾವು ಬಿಳಿಯ ಜನರೊಂದಿಗೆ ಅನುಭವಿಸಿದ ಸಂಗತಿಗಳನ್ನು ಕುರಿತು ಹೇಳುತ್ತಾರೆ. ಆ ಸಂಗತಿಗಳೇ ತಮ್ಮ ಕತೆಗೆ ವಸ್ತುಗಳಾಗುತ್ತವೆ ಎಂದು ಮಿರಿಯಮ್ ಟ್ಲ್ಯಾಲಿ ನುಡಿಯುತ್ತಾರೆ.

ಕನ್ಯತ್ವದ ಬಗ್ಗೆ ದ: ಆಫ್ರಿಕಾದಲ್ಲಿ ಕೆಲವು ನಿಷೇಧಗಳಿವೆ. ಮದುವೆಗೆ ಮುಂಚೆ ಆಕೆ ಬೇರೆಯವರ ಜೊತೆ ಸಂಬಂಧ ಹೊಂದಿದ್ದರೆ ಅದನ್ನು ಕುರಿತು ಆಕೆ ಮಾತನಾಡಬಾರದು. ಆದರೆ ಪುರುಷನಿಗೆ ಈ ವಿಚಾರದಲ್ಲಿ ನಿರ್ಬಂಧವಿಲ್ಲ. ಈ ರೀತಿಯ ಅನುಭವಗಳನ್ನು ಆತ ಹೆಮ್ಮೆಪಟ್ಟುಕೊಳ್ಳುತ್ತಾನೆ. ಇದನ್ನು ಸ್ವಚ್ಛಂದವಾಗಿ ಮಾತನಾಡುತ್ತಾನೆ. ಅವರು "ನಾನು ಆಕೆಯೊಂದಿಗೆ ಹೋಗಿದ್ದೆ ಆಹ್ ಆಕೆಯೇನು? ಅಂತಹ ವಿಶೇಷವಿಲ್ಲ ಬಿಡು" - ಎಂಬಂತಹ ಸಂಗತಿಗಳನ್ನು ಕುರಿತು ಬೊಂಬಡಿ ಹೊಡೆಯುತ್ತಾರೆ. ಆದರೆ ತನ್ನ ಹೆಂಡತಿ ಇಂತಹ ಅನುಭವಗಳನ್ನು ಹಂಚಿಕೊಳ್ಳುವುದಕ್ಕೆ ಆಕೆ ಬಿಡುವುದೇ ಇಲ್ಲ.

"ಫೆಮಿನಿಸಂ" ಬಗ್ಗೆ ದ. ಆಫ್ರಿಕಾದಲ್ಲಿ ಬರೆಯಲು ಪ್ರಾರಂಭಿಸಿದವರೇ ಮಿರಿಯಂ ಟ್ಲ್ಯಾಲಿ. ಮಹಿಳೆಯರೇನಾದರೂ ಸಾಧಿಸಿದ್ದೇ ಆದರೆ ಅವರನ್ನು

"ಫೆಲೋ ಮೆನ್" ಎಂದು ಭಾವಿಸುತ್ತಾರೆಯೇ ಹೊರತು ಒಬ್ಬ ಮಹಿಳೆಯಾಗಿ ತುಂಬಾ ಪ್ರಮುಖ ವಾದುದೊಂದನ್ನು ನೀವು ಸಾಧಿಸಿದ್ದೀರೆಂದು ತಿಳಿಯುವುದಿಲ್ಲ. ಹಾಗೆ ನೋಡದಲ್ಲಿ ದ. ಆಫ್ರಿಕಾದಲ್ಲಿ ಬಿಳಿಯ ಹೆಂಗಸರು ಹೆಚ್ಚು ಅಧಿಕಾರ ಹೊಂದಿದ್ದಾರೆ. ಅವರಿಗೆ ಸಂಬಂಧವಿದ್ದ ಕಾನೂನುಗಳಲ್ಲಿ ಗಣನೀಯ ವಾದ ಬೆಳವಣಿಗೆ ಕಂಡು ಬಂದಿದೆ. ಎಲ್ಲಿಯವರೆಗೆ ಎಂದರೆ ಯಾವುದೇ ಪೀಠೋಪಕರಣ, ಕಾರು ಅಥವಾ ರೆಫ್ರಿಜರೇಟರ್ ಇಂತಹವುಗಳನ್ನು ಕೊಳ್ಳುವುದಕ್ಕೆ ಅವರ ಗಂಡಂದಿರ ಸಹಿ ಬೇಡ. ಮಿರಿಯಂ ಪ್ರಕಾಶಕರ ಜೊತೆ ಒಪ್ಪಂದ ಮಾಡಿಕೊಳ್ಳುವಲ್ಲಿ ಅವರೇ ಸಹಿ ಮಾಡುವುದನ್ನು ಸಹ ನಿರ್ಬಂಧಿಸಲಾಗಿತ್ತು. ಮಿರಿಯಮ್ ಪುಸ್ತಕ ಪ್ರಕಾಶಕರ ಜೊತೆಗಿನ ಒಪ್ಪಂದಕ್ಕೆ ಮಿರಿಯಂ ಗಂಡನೇ ಸಹಿ ಮಾಡಬೇಕಾಯ್ತು.

ಬಿಳಿಯ ಹಾಗೂ ಕರಿಯ ಹೆಂಗಸರು ಒಟ್ಟಾಗಿ ದ. ಆಫ್ರಿಕಾದಲ್ಲಿ ಬಿಳಿಯರ ದಬ್ಬಾಳಿಕೆಯ ವಿರುದ್ಧ ಹೋರಾಡುತ್ತಿದ್ದರೂ ಇವರಿಬ್ಬರಲ್ಲಿ ನಿಜವಾದ ಒಗ್ಗೂಡುವಿಕೆ ಇಲ್ಲ. "ಅಪಾರ್ಥೈಯ್ಡ್" ನಿಂದಾಗಿ ದ. ಆಫ್ರಿಕಾದಲ್ಲಿ ಈ ಸಮಸ್ಯೆಯನ್ನು ಅಭ್ಯಸಿಸಲು ಬಂದ ಪತ್ರಿಕೋದ್ಯಮಿಯೊಬ್ಬರು ಬಿಳಿಯ ಸ್ತ್ರೀಯರಲ್ಲಿ ಈ ಪ್ರಶ್ನೆಯನ್ನು ಎತ್ತಿದ್ದರು. ಬಿಳಿಯರಿಗಿಂತ ಹಿಂದಿರುವ ಕಪ್ಪು ಜನಾಂಗದ ಸ್ತ್ರೀಯರ ಸ್ಥಿತಿಯನ್ನು ಸುಧಾರಿಸಲು ಅವರು ಏಕೆ ಒಟ್ಟಾಗಿ ಹೋರಾಡುವುದಿಲ್ಲವೆಂದು ಬಿಳಿಯ ಸ್ತ್ರೀಯರನ್ನು ಕುರಿತು ಕೇಳಿದಾಗ ಅವರಿಂದ ಬಂದ ಉತ್ತರ ಹೀಗಿತ್ತು: "ನಮ್ಮ ಗಂಡಸರಿಗೆ ಅಧಿಕಾರ ವರ್ಗದ ವಿರುದ್ಧ ನಿಂತು ಹೋರಾಡುವುದು ಇಷ್ಟವಾಗುವುದಿಲ್ಲ" — ಅಂದರೆ ಆ ಸ್ತ್ರೀಯರು ಯಾವ ರೀತಿಯ ಕಾರ್ಯ ಚಟುವಟಿಕೆಗಳಲ್ಲಿ ತೊಡಗಬೇಕೆಂಬುದನ್ನು ಅವರ ಗಂಡಂದಿರೇ ನಿರ್ಧರಿಸುತ್ತಾರೆ, ಕಪ್ಪು ಜನಾಂಗದ ಪುರುಷರೂ ಸಹ ತಮ್ಮ ಸ್ತ್ರೀಯರಿಗೆ ಹೆಚ್ಚು ಪ್ರೋತ್ಸಾಹ ನೀಡುವುದಿಲ್ಲ. ತಮಗೆ ಗೊತ್ತಿಲ್ಲದ್ದನ್ನು ತಮ್ಮ ಹೆಂಗಸರು ಓದುವುದಾಗಲೀ ಅಥವಾ ಬರೆಯುವುದಾಗಲೀ ಯಾರೂ ಇಷ್ಟ ಪಡುವುದಿಲ್ಲ. ಹೀಗೆ ಬರೆಯುವುದಕ್ಕೆಂದು ತಮ್ಮನ್ನು ತೊಡಗಿಸಿಕೊಳ್ಳುವ ಸ್ತ್ರೀಯರು ಹೆಚ್ಚು ಹೋರಾಟಭಾವದ ಬಲದಿಂದ ತಮ್ಮ ವ್ಯಕ್ತಿತ್ವದ ಸಮಗ್ರತೆಯನ್ನು ಕಾಯ್ದುಕೊಳ್ಳಬೇಕಾಗುತ್ತದೆ.

೫ ಮಕ್ಕಳ ತಾಯಿ ಮಿರಿಯಮ್ ಟ್ಲ್ಯಾಲಿ ಲೇಖಕಿಯಾದದ್ದು ಹೇಗೆ? ಇವರ ತಾಯಿ ಇವರಿಗೆ ಯಾವಾಗಲೂ ಪ್ರೋತ್ಸಾಹ ನೀಡಿದ ಪ್ರಥಮ ವ್ಯಕ್ತಿ. ಆಕೆಯ ಶಿಕ್ಷಕ ತಂದೆ ಈಕೆಯು ಸಣ್ಣ ವಯಸ್ಸಿನಲ್ಲಿಯೇ ಸಾಯುವಾಗ ಈಕೆಗೆ ಬಿಟ್ಟು ಹೋದ ಆಸ್ತಿಯೆಂದರೆ ಪುಸ್ತಕಗಳು. ಶಾಲೆಯಲ್ಲಿದ್ದಾಗ ಚಿಕ್ಕ ಚಿಕ್ಕ ಪದ್ಯಗಳನ್ನು ಬರೆಯುವ ಅಭ್ಯಾಸ ಈಕೆಯದು. ಆ ಪದ್ಯಗಳು ಕೂಡಾ ಸಾಕಷ್ಟು ಪ್ರಶಂಸಿಸಲ್ಪಟ್ಟಿದ್ದವು. ಆದಾಗ್ಯೂ ತಾನೊಬ್ಬ ಬರಹಗಾರ್ತಿಯಾಗಬಹುದೆಂದು ಕನಸು ಕಂಡವರಲ್ಲ ಈಕೆ. ವಿಶ್ವವಿದ್ಯಾನಿಲಯದ ದೆಸೆಯಲ್ಲಿ ಓದಿದ್ದನ್ನು ವಿಮರ್ಶಾ ದೃಷ್ಟಿಯಿಂದ ನೋಡುವಂತೆ ಮಾಡುವ, ಯೋಚಿಸುವಂತೆ ತಿಳಿ ಹೇಳುವ ಗುರುಗಳು ಈಕೆಗಿದ್ದರು. ತಾವು ಬರೆದ ಕೃತಿಗಳಿಗೆ ಬಂದ ವಿಮರ್ಶೆ ತಮಗೆ ಪ್ರೋತ್ಸಾಹ ದಾಯಕವಾಗಿಯೇ ಇದೆ ಎಂದು ಮಿರಿಯ್ ನುಡಿಯುತ್ತಾರೆ. ಹಾಗೂ ಈ ವಿಚಾರದಲ್ಲಿ ತಾವು ಅದೃಷ್ಟವಂತೆ ಎನ್ನುವುದು ಇವರ ಭಾವನೆ. ಬರೆಯುವುದನ್ನು ತುಂಬಾ ಮುಖ್ಯವಾದ ಸಂಗತಿ ಎಂದು ಈಕೆ ಪರಿಗಣಿಸುತ್ತಾರೆ. ಬರವಣಿಗೆ ಸಾಕಷ್ಟು ಬದಲಾವಣೆಗಳನ್ನು ತರುತ್ತದೆ ಎಂಬುದೂ ಈಕೆಯ ನಂಬುಗೆ. ಹಾಗಿಲ್ಲದಿದ್ದಲ್ಲಿ ಇಷ್ಟರಮಟ್ಟಿಗಿನ ಸೆನ್ಸಾರ್‌ಶಿಪ್‌ಗಳು ಇರುತ್ತಿರಲಿಲ್ಲ ಎಂದು ಇವರು ನುಡಿಯುತ್ತಾರೆ. ಅಧಿಕಾರ ವರ್ಗದವರು ಪುಸ್ತಕಗಳ ಬಗ್ಗೆ ಯಾವಾಗಲೂ ಹೆದರುತ್ತಾರೆ. ಜ್ಞಾನವನ್ನು ಅಪಾಯ ಎಂದು ಅವರು ಪರಿಗಣಿಸುತ್ತಾರೆ. ಏನೂ ಗೊತ್ತಿಲ್ಲದ ಮುಗ್ಧರು ತಮ್ಮ ಸುತ್ತ-ಮುತ್ತ ಇರುವುದನ್ನು ಅಧಿಕಾರ ವರ್ಗ ಅಪೇಕ್ಷಿಸುತ್ತದೆ. ಈ ರೀತಿಯ ಅಜ್ಞಾನವನ್ನು ನಾವು ಹೋರಾಟದಿಂದ ಗೆಲ್ಲಬೇಕು ಎಂಬುದು ಮಿರಿಯಮ್‌ರವರ ನಿಲವು.

ದ. ಆಫ್ರಿಕಾದ ಜನರಿಗೆ ವಿದ್ಯಾಭ್ಯಾಸದ ಅವಕಾಶಗಳು ಸಾಕಷ್ಟಿಲ್ಲವೆಂಬುದು ಮಿರಿಯಮ್‌ರವರ ಕಳಕಳಿ. ಎಣಿಸಲಾರದಷ್ಟು ಪುಸ್ತಕಗಳಿದ್ದರೂ ಅವರಿಗೆ ಓದುವ ಅವಕಾಶಗಳಿಲ್ಲ. ಸದಾ ಓದುತ್ತಿರಬೇಕೆಂಬುದು ಮಿರಿಯಮ್‌ರವರ ಬಯಕೆ. ತಮಗೆ ಎಲ್ಲಿಯವರೆಗೆ ಆಗುತ್ತದೆಯೋ ಅಲ್ಲಿಯವರೆಗೆ ಬರೆಯುತ್ತೇನೆ

ಎಂದು ಈಕೆ ನುಡಿಯುತ್ತಾರೆ.

ಇಡಿಯ ಜಗತ್ತಿನ ಮಹಿಳೆಯರಿಗೆ ಮಿರಿಯಂರ ವರ ಸಂದೇಶವೇನು? ಮಹಿಳೆಯರು ಒಗ್ಗಟ್ಟಿಗಾಗಿ ಶ್ರಮಿಸಬೇಕು ಹಾಗೂ ಅವರಿಗಾಗಿ ಅವರೊಂದು ವೇದಿಕೆ ನಿರ್ಮಿಸಿಕೊಳ್ಳಬೇಕು. ತಮ್ಮ ಸುತ್ತ ತಮಗಿರುವ ಬೇಡಿಗಳನ್ನು ಮುರಿದು ತಮಗಾಗಿ ವೇದಿಕೆ ನಿರ್ಮಿಸಿಕೊಳ್ಳುವುದು ಮಹಿಳೆಯರ ಬೆಳವಣಿಗೆಗೆ ಅಗತ್ಯ, ತಮ್ಮ ಜೊತೆಗಿರುವ ಇತರರನ್ನು ಶಿಕ್ಷಿತರನ್ನಾಗಿಸುವುದು. ಹೀಗಾದಾಗ ಕೊನೆಯಲ್ಲಿ ಎಲ್ಲೋ ಹೆಂಗಸು ತನ್ನ ಧ್ವನಿ ಕಂಡುಕೊಳ್ಳಲು ಸಾಧ್ಯವಾಗುತ್ತದೆ ಎನ್ನುತ್ತಾರೆ ಮಿರಿಯಮ್ ಟ್ಲಾಲಿ.

ಎಚ್. ಎಸ್. ಚಂಪಾವತಿ

○ ○ ○

## ಭಾರತದ ಪ್ರಥಮ ಮಹಿಳಾ ವೈದ್ಯೆ
## ಡಾ|| ಆನಂದಿಬಾಯಿ ಜೋಷಿ

ಸುಮಾರು ನೂರು ವರ್ಷಗಳ ಹಿಂದೆ, ಫಿಲಿಡೆಲ್ಫಿಯಾ ಎಂಬಲ್ಲಿ ಶ್ರೀಮತಿ ಕಾರ್ಪೆಂಟರ್ ಎಂಬ ಅಮೇರಿಕಾದ ಮಹಿಳೆ, ಅಲ್ಲಿನ ದಂತ ವೈದ್ಯರ ಕ್ಲಿನಿಕ್‌ನಲ್ಲಿ ಇದ್ದ ಅಮೇರಿಕಾದ "ಕ್ರಿಶ್ಚಿಯನ್ ರಿವ್ಯೂ" ಎಂಬ ಹಳೆಯ ಪತ್ರಿಕೆಯ ಮೇಲೆ ಕಣ್ಣಾಡಿಸುತ್ತಿದ್ದಾಗ ಅದರಲ್ಲಿದ್ದ ಒಂದು ಪತ್ರ ಅವಳ ಗಮನ ಸೆಳೆಯಿತು. ಅದು ಪುಣೆಯ ಗೋಪಾಲರಾವ್ ಎಂಬುವವರು ತನ್ನ ಪತ್ನಿಯ ವೈದ್ಯಕೀಯ ಶಿಕ್ಷಣಕ್ಕಾಗಿ ಧನ ಸಹಾಯ ಕೋರಿ ಬರೆದ ಪತ್ರವಾಗಿತ್ತು. ಈ ಪತ್ರವೇ ಭಾರತದ ಪ್ರಥಮ ಮಹಿಳಾ ವೈದ್ಯೆಯಾದ ಆನಂದಿ ಭಾಯಿ ಜೋಷಿಯವರ ಜೀವನಕ್ಕೆ ಒಂದು ತಿರುವಾಯಿತು.

೧೮೬೫ ಮಾರ್ಚ್ ೩೧ರಲ್ಲಿ ಬಾಂಬೆಯ ಹತ್ತಿರದ ಕಲ್ಯಾಣ ಎಂಬಲ್ಲಿ ಯಮುನ ಹುಟ್ಟಿದಳು. ಅವಳ ೯ನೇ ವಯಸ್ಸಿನಲ್ಲಿ, ಗೋಪಾಲರಾವ್ ಎಂಬುವವರೊಡನೆ ಮದುವೆಯಾಯಿತು, ನಂತರ ಸಂಪ್ರದಾಯಕ್ಕೆ ತಕ್ಕಂತೆ ಅವಳಿಗೆ "ಆನಂದಿ" ಎಂದು ನಾಮಕರಣವಾಯಿತು. ಅಂದಿನ ಕಾಲದಲ್ಲಿ ಅನಿಷ್ಟ ಪದ್ಧತಿಯಾದ ಬಾಲ್ಯ ವಿವಾಹವನ್ನು ಹೆಣ್ಣು ಮಕ್ಕಳ ಮೇಲೆ ಹೇರಲಾಗಿತ್ತು. ಗೋಪಾಲರಾವ್ ಈ ರೀತಿಯ ಮಹಿಳಾ ಶೋಷಣೆಯ ವಿರುದ್ಧ ಏನಾದರು ಕ್ರಮ ಕೈಗೊಳ್ಳಬೇಕೆಂದು ಮೊದಲಿನಿಂದಲು ಆಲೋಚಿಸುತ್ತಿದ್ದರು ಇದರ ಜೊತೆಗೆ ತಮ್ಮ ಪತ್ನಿಗೆ ಉನ್ನತ ಶಿಕ್ಷಣವನ್ನು ಕೊಡಿಸಬೇಕೆಂದು ನಿರ್ಧರಿಸಿದರು.

ಆದರೆ ಅಂದಿನ ದಿನಗಳಲ್ಲಿ ಒಬ್ಬ ಮಹಿಳೆ ಹೊರ ದೇಶಕ್ಕೆ ಹೋಗಿ ಉನ್ನತ ಶಿಕ್ಷಣವನ್ನು ಪಡೆಯುವುದು ಬಹು ದೂರದ ಮಾತಾಗಿತ್ತು. ಅಂದಿನ ಕಾಲದ ಸಾಮಾಜಿಕ ಸಂಪ್ರದಾಯವಾದ ಪರದೆ, ಘೋಷ ಮುಂತಾದವುಗಳಿಗೆ ಹೆಣ್ಣು ಮಕ್ಕಳು ಬಲಿಯಾಗುತ್ತಿದ್ದರು. ಇಂತಹ ಪರಿಸರದಿಂದ ಕೂಡಿದ ಸಮಾಜಕ್ಕೆ ಒಬ್ಬ ಮಹಿಳಾ ವೈದ್ಯೆಯ ಅವಶ್ಯಕತೆ ಇದೆ ಎಂದು ಆನಂದಿಯವರು ಮನಗಂಡಿದ್ದರು.

ಜೊತೆಗೆ ಆನಂದಿಯವರ ಹದಿನಾಲ್ಕನೇ ವಯಸ್ಸಿನಲ್ಲಿ ಅವರ ಮೊದಲ ಮಗು ಹುಟ್ಟುತ್ತಲೇ ತೀರಿ

ಕೊಂಡಾಗ, ಆ ಮಗುವಿನ ದುರಂತ ಆನಂದಿಯವರ ಗುರಿಯನ್ನು ಮತ್ತಷ್ಟು ಧೃಡ ಪಡಿಸಿತು.

ಆದರೂ ಮಹಿಳೆಗೆ ಉನ್ನತ ಶಿಕ್ಷಣವನ್ನು ಕೊಡಿಸುವುದು ಅಂದು ಹಾಸ್ಯದ ವಿಷಯವಾಗಿತ್ತು. ಆದರೆ ಅಂದಿನ ಸಮಾಜದ ಕಟ್ಟು ಪಾಡುಗಳ ವಿರುದ್ಧ ಆನಂದಿ ಹಾಗೂ ಗೋಪಾಲ್‌ರಾವರು ಹೋರಾಡದೆ ಬೇರೆ ದಾರಿ ಇರಲಿಲ್ಲ. ಈ ಸಮಯದಲ್ಲಿ ಗೋಪಾಲ್ ರಾವರಿಗೆ ಮುಂಬೈಗೆ ವರ್ಗ ವಾಗಿದ್ದರಿಂದ ಆನಂದಿಯವರ ಮುಂದಿನ ವಿಧ್ಯಾಭ್ಯಾಸ ಸುಗಮವಾಗಿ ಆಯಿತು.

ಮುಂದೆ ಸರಿಯಾದ ಹಣದ ಸಹಾಯವಿಲ್ಲದೇ ಇರುವುದರಿಂದ ಅವರಿಬ್ಬರೂ ಕಲೆತು ಅಮೇರಿಕಾಗೆ ಆನಂದಿಯವರ ಉನ್ನತ ಶಿಕ್ಷಣಕ್ಕಾಗಿ ಹೋಗುವುದು ಸಾಧ್ಯವಾಗುತ್ತಿರಲಿಲ್ಲ. ಗೋಪಾಲ್‌ರಾವ್‌ರವರು ತಮ್ಮ ಪತ್ನಿಯನ್ನು ಉನ್ನತ ವಿಧ್ಯಾಭ್ಯಾಸಕ್ಕಾಗಿ ಅಮೇರಿಕಾಗೆ ಕಳುಹಿಸಲು ಕಾರಣ ಆಗಿನ ಕಾಲದಲ್ಲಿ ಅಮೇರಿಕಾದಲ್ಲಿ ವೈದ್ಯಕೀಯ ಶಿಕ್ಷಣಕ್ಕೆ ಉತ್ತಮ ರೀತಿಯಲ್ಲಿ ಸೌಲಭ್ಯ ಗಳಿದ್ದವು. ಆದ್ದರಿಂದ ಅವರು ಅಮೇರಿಕಾದ ಕೆಲವು ಸಂಘ ಸಂಸ್ಥೆಗಳಿಗೆ ಧನ ಸಹಾಯ ಕೋರಿ ಪತ್ರ ಬರೆಯುತ್ತಿದ್ದರು. ಗೋಪಾಲ್‌ರವರಿಗೆ ಮನಃ ಸ್ಥೈರ್ಯ ಇದ್ದಷ್ಟು ತಾಳ್ಮೆ ಇರಲಿಲ್ಲ. ಅವರಿಗೆ ತಮ್ಮ ಪತ್ನಿ ಆದಷ್ಟು ಬೇಗ ವೈದ್ಯಳಾಗುವ ಆಸೆ. ಅದಕ್ಕಾಗಿ ಅವಕಾಶ ಬಂದರೆ ಮತಾಂತರ ಹೊಂದಲು ಸಿದ್ಧರಿದ್ದರು ಆದರೆ ಆನಂದಿಯವರಿಗೆ ಮಾತ್ರ ಮತಾಂತರ ಹೊಂದಲು ಇಷ್ಟವಿರಲಿಲ್ಲ.

ಶ್ರೀಮತಿ ಕಾರ್ಪೆಂಟರ್ ಎಂಬಾಕೆ "ಕ್ರಿಶ್ಚಿಯನ್ ರಿವ್ಯೂನಲ್ಲಿ" ಗೋಪಾಲ್‌ರವರ ಪತ್ರ ಓದಿದ ನಂತರ ಆನಂದಿಯವರಿಗೆ ಪತ್ರ ಬರೆಯ ತೊಡಗಿದರು. ಸುಮಾರು ೧೮೮೧ ರಿಂದ ೧೮೮೩ ರವರೆಗೆ (ಅಂದರೆ ಸುಮಾರು ೩ ವರ್ಷ) ನಡೆದ ಪತ್ರ ವ್ಯವಹಾರದಿಂದ ಅವರಿಬ್ಬರ ಮಧ್ಯೆ ಅಗಾಧವಾದ ಪ್ರೀತಿ ಸ್ನೇಹ ಬೆಳೆದಿತ್ತು. ಈ ಪತ್ರಗಳ ಮೂಲಕ ತಮ್ಮ-ತಮ್ಮ ದೇಶದ ಸಂಸ್ಕೃತಿ, ಆಚಾರ ವಿಚಾರಗಳ ವಿನಿಮಯ ಮಾಡಿ ಕೊಳ್ಳುತ್ತಿದ್ದರು.

ಇಷ್ಟರಲ್ಲಿ ಗೋಪಾಲ್ ಹಾಗೂ ಆನಂದಿಯವರು ಬೇರೆ ಬೇರೆ ಊರುಗಳಲ್ಲಿ ಜೀವನ ನಡೆಸಿಯಾಗಿತ್ತು. ಈ ಮಧ್ಯೆ ಗೋಪಾಲ್‌ರವರು ಸಾಕಷ್ಟು ಹಣ ಉಳಿಸಲು ಪ್ರಯತ್ನಿಸುತ್ತಿದ್ದರು. ಆದರೂ ಆ ಹಣ ಅವರಿಬ್ಬರನ್ನು ಅಮೇರಿಕಾಗೆ ಕರೆದೊಯ್ಯಲು ಸಾಕಾಗುತ್ತಿರಲಿಲ್ಲ. ಆದ್ದರಿಂದ ಆನಂದಿಯೊಬ್ಬರನ್ನೇ ಅಮೇರಿಕಾಗೆ ಕಳುಹಿಸಲು ನಿರ್ಧರಿಸಿದರು.

ಅಂದು ಒಬ್ಬ ಮಹಿಳೆ ಸಪ್ತ ಸಾಗರವನ್ನು ದಾಟಿ ಗೊತ್ತಿಲ್ಲದ ದೇಶಕ್ಕೆ ಹೋಗಿ ಉನ್ನತ ಶಿಕ್ಷಣವನ್ನು ಪಡೆಯುವುದು ಅಂದಿನ ಸಂಪ್ರದಾಯಸ್ಥ ಹಿಂದೂಗಳ ಮನದಲ್ಲಿ ಬಿರುಗಾಳಿ ಎಬ್ಬಿಸಿತ್ತು. ಆದರೆ ಅದನ್ನು ಅವರಿಬ್ಬರೂ ಎದುರಿಸದೆ ಬೇರೆ ದಾರಿ ಇರಲಿಲ್ಲ. ಕೆಲವು ಸಂಪ್ರದಾಯಸ್ಥರು ಆನಂದಿಯವರನ್ನು ಜಾತಿಯಿಂದ ಬಹಿಷ್ಕರಿಸಬೇಕೆಂದು ನಿರ್ಧರಿಸಿದ್ದರು ಕೂಡಾ.

ಆನಂದಿಯವರು ಅಮೇರಿಕಾಗೆ ತೆರಳುವ ಮುಂಚೆ ಕೆಲವು ಸಮಾಜ ಸುಧಾರಕರು ಅವರಿಗಾಗಿ ಒಂದು ಸನ್ಮಾನ ಸಮಾರಂಭವನ್ನು ಏರ್ಪಡಿಸಿದ್ದರು. ಅಲ್ಲಿ ಆನಂದಿಯವರು ತಾವು ಅಮೇರಿಕಾಗೆ ಏಕೆ ಹೋಗುತ್ತಿರುವುದು ಎಂಬುದರ ಬಗ್ಗೆ ಒಂದು ನಿಖರವಾದ ಹೇಳಿಕೆಯನ್ನು ಈ ರೀತಿ ಕೊಟ್ಟರು. ಅವರು, ತಾನು ಅಲ್ಲಿಗೆ ಹೋಗುತ್ತಿರುವುದು ಒಂದು ಒಳ್ಳೆಯ ಕೆಲಸಕ್ಕಾಗಿ ಎಂದೂ ಹಾಗೂ ತನ್ನ ಧರ್ಮವನ್ನು ತಾನು ಬದಲಾಯಿಸದೆ ಹಿಂದೂ ಆಗಿಯೇ ಹೋಗಿ ಹಿಂದೂ ಆಗಿಯೇ ಮರಳುವೆ ಎಂದು ಭರವಸೆ ಇತ್ತರು.

ಆನಂದಿಯವರು "ದಿ ಸಿಟಿ ಆಫ್ ಕಲ್ಕತ್ತಾ" ಎಂಬ ಹಡಗಿನಲ್ಲಿ ೧೮೮೩ ಏಪ್ರಿಲ್ ೭ರಂದು ಕಲ್ಕತ್ತಾದಿಂದ ಅಮೇರಿಕಾಗೆ ತೆರಳಿದರು. ಅಲ್ಲಿ ಶ್ರೀಮತಿ ಕಾರ್ಪೆಂಟರ್ ಅವರ ಮನೆಯವರೊಡನೆ ಆನಂದಿಯವರನ್ನು ಸ್ವಾಗತಿಸಲು ಅತ್ಯುತ್ಸಾಹದಿಂದ ನಿಂತಿದ್ದರು.

ಆನಂದಿಯವರಿಗೆ ಪೆನ್ಸಿಲ್‌ವೇನಿಯಾದ ಮಹಿಳಾ ಮೆಡಿಕಲ್ ಕಾಲೇಜಿನಲ್ಲಿ ಪ್ರವೇಶ ದೊರೆಯುವುದರ ಜೊತೆಗೆ ಸ್ಕಾಲರ್‌ಶಿಪ್ ಸಹ ದೊರೆಯತೊಡಗಿತು. ಇದರಿಂದ ಆಕೆಯ ವಿದ್ಯಾಭ್ಯಾಸ ಆರ್ಥಿಕ ಅಡಚಣೆ ಇಲ್ಲದೆ ನಿರಂತರವಾಗಿ ಸಾಗಿತು. ಆದರೆ ಅವರ ಜೀವನ

24 ನೇ ಪುಟ ನೋಡಿ

# ಗಿರಕಿ ಸುತ್ತುವ ಬದುಕು



ಅಂಜನದ ಕನ್ನಡಿ ಮುಲುಕಿದ
ರಾಮಾಯಣದ ಮದ್ಯಂತರ ತೆರೆ
ಒಳ ಮಿದುಳು ತಿದ್ದಂತೆ ಅಜ್ಜಿ
ಕೊರಳುಬ್ಬಿ ಕಣ್ಣು ತೊಟ್ಟಿಕ್ಕಿ
ಪಕ್ಕದ ಅಡಿಕೆಲೆ ಸಂಚಿ
ತಡವಿ ನಿಡು ಸುಯ್ಯುತ್ತಾಳೆ;
ಇಂತವೆಷ್ಟೊ ಕೇಳಿಕೆ ಬಯಲಾಟ
ಕಂಡು, ಕೇಳಿದರೂ, ಕನಿಕರಿಸಿ
ಕನಲುತ್ತಾಳೆ.

ಓ ತಾಯೆ ಸೀತಮ್ಮ
ಮುಗೀವಲ್ಲದು ಮೊಗಾ ನಿನ್ನ ವೊನವಾಸ
ಪರದೆ ಎಳೆದವರೆ ಅಷ್ಟೆ
ಕರುಳ ಕುಡಿಗಳ ಹೊಟ್ಟೆ
ಜುಳ ಜುಳ ಈಜಾಟ
ಒದ್ದಾಟ ಒಳಹೊತ್ತ ಬಿಮ್ಮನಸೆ
ನೀಸಾಗ ಬೇಕಿದೆ ಕೊನೆಗಾಣದ ಹಾದಿ.

ರಾಮಾಯಣ ಕಣದ ಬಣವೆ
ಕೆಂಡರಗುಳುತಿದೆ, ಹೊಟ್ಟೆ ಹೊಗೆಯಾಡಿ
ಅರಂಡ ಗೋರೆಂಡಡವಿಯೊಳು
ಗಿರಕಿ ಸುತ್ತುವ ಬದುಕು ರಥಚಕ್ರ
ನೋಟಗಳ ಸುಖ ಕನಸುಗಳ ಹೊತ್ತ
ನಿನ್ನ ಇಳಿಸಿ ಬರುತ್ತಾನಮ್ಮ
ಸಿರಿ ಮೈದ ಲಕ್ಷ್ಮಣ ದೇವ
ಇನ್ನೆಷ್ಟು ಕುಮುಲ ಬೇಕೊ
ಬಸುರ ಹಿಂಡ ತಳಮಳಿಸ ಬೇಕೋ

ಓ ಲಕ್ಷ್ಮಣೋ ಇದು
ವನ ವಿಹಾರದ ತಂಪಲ್ಲವಯ್ಯಾ
ವೊನವಾಸದ ಹಬೆ ಸುರುಕು
ಸುಡು ಸುಡು ಕೆಂಡ ಸೀಸದ
ದಿಟ್ಟ ಹೆಂಡಿರ ನಾಳುವ

ಗಂಡಾಗಲಲ್ಲ ನೋಡು ಕೊನೆಗೂ
ಆ ನರಸತ್ತ, ವರ ರಾಮದೇವ

ಓ ಹೆಣ್ಣೆ ಕಂದಮ್ಮ
ನಿನ್ನ ಮಿಗಿಲಾದ ಹೆಣ್ತನ
ಆ ರೋಸಕವೇ ಹೊಮ್ಮಿ
ತಾಯ ಮಡಿಲ ಹೊಕ್ಕಿ
ದಟ್ಟವಾಗಿಯೇ ಉಳಿದೆ
ನಿನ್ನ ಕುಲಕ್ಕೆ.

ಉತ್ತನೂರು ರಾಜಮ್ಮ ವಿ. ಶೆಟ್ಟಿ
ಚಿಂತಾಮಣಿ,

# ಸ್ವಾವಲಂಬಿ ಮಹಿಳೆ ಕಂಡ ಔದ್ಯೋಗಿಕ ಕ್ಷೇತ್ರ

1990ರಿಂದೀಚೆಗೆ ಉದ್ಯೋಗವನ್ನರಸುವ ಪ್ರವೃತ್ತಿ ಮಹಿಳೆಯರಲ್ಲಿ ಹೆಚ್ಚಿದೆ. ಹೀಗೆಂದಾಕ್ಷಣ ಎಲ್ಲರೂ ತಾವು ಸ್ವಾವಲಂಬಿಗಳಾಗಬೇಕೆಂಬ ಹಂಬಲದಿಂದ ಉದ್ಯೋಗಕ್ಕೆ ಸೇರುವ ಮನಸ್ಸು ಮಾಡಿದವರಲ್ಲ. ವಿವಾಹವಾಗುವವರೆಗೆ ಕೆಲಸ ಮಾಡುವುದು, ನಂತರ ಅವರು ಹೇಳಿದ ಹಾಗೆ ಎಂಬ ಮನೋಧರ್ಮವುಳ್ಳವರು. ಇಂದು ಈ ಮನೋಧರ್ಮದಲ್ಲಿ ಹೆಚ್ಚಿನ ಭಿನ್ನತೆ ಕಂಡು ಬರುವುದಿಲ್ಲ. ಆದರೆ ೨ ದಶಕಗಳಿಂದ ಉದ್ಯೋಗದಲ್ಲಿ ಗಟ್ಟಿಯಾಗಿ ನಿಂತವರು ಉದ್ಯೋಗದಲ್ಲಿದ್ದು ಹೊರಬಂದವರ ಸ್ಥಿತಿಗತಿಗಳನ್ನು ವಿಮರ್ಶಾತ್ಮಕವಾಗಿ ವಿಚಾರ ಮಾಡಿದಾಗ ಮಹಿಳೆ ಸ್ವಾವಲಂಬಿಯಾಗಲು ಎಷ್ಟೇ ಘರ್ಷಣೆಗಳಿದ್ದರೂ ಮುಂದಿಟ್ಟ ಹೆಜ್ಜೆಯನ್ನು ಹಿಂತೆಗೆಯಬಾರದೆಂಬ ಅರಿವುಂಟಾಗಿರುವುದು ಗೋಚರಿಸುತ್ತದೆ ಮಹಿಳಾ ಸಂಘಟನೆಗಳ ಶ್ರಮ ಸಾರ್ಥಕ.

ಸ್ತ್ರೀಯರು ತಮ್ಮ ಮುಗ್ಧತೆಯಿಂದಾಗಿ ಬೇಸ್ತುಬೀಳುತ್ತಾರೆ, ಅಸಹಾಯಕರಾಗುತ್ತಾರೆ ಎಂಬ ಅಭಿಪ್ರಾಯ ದೂರವಾಗತೊಡಗಿದೆ. ವಾಸ್ತವವಾಗಿ ಔದ್ಯೋಗಿಕ ಕ್ಷೇತ್ರಗಳಲ್ಲಿರುವ ಪುರುಷರು ಸಂಸಾರ ನೊಗವನ್ನು ಹೊರುವುದು ಕಷ್ಟ ಎಂಬ ನಿಲುವಿನವರು. ವೃತ್ತಿಯಲ್ಲಿ ಆಸಕ್ತಿ, ಹುಮ್ಮಸ್ಸು ಅವರಲ್ಲಿ ಇಲ್ಲದಿರುವುದು ಗಮನಕ್ಕೆ ಬಂದಿದೆ. ಹೀಗೆಂದಾಕ್ಷಣ ಸಂಸಾರಿಗಳು ಔದ್ಯೋಗಿಕ ಕ್ಷೇತ್ರದಲ್ಲಿ ಏನನ್ನೂ ಸಾಧಿಸಲು ಸಾಧ್ಯವಿಲ್ಲವೇ ಎಂಬ ಪ್ರಶ್ನೆ ಉದ್ಭವಿಸುತ್ತದೆ, ಪುರುಷರ ಸಂಖ್ಯೆ ಹೆಚ್ಚಿನದ್ದಾಗಿರುವುದರಿಂದ ಅವರ ಅಸಹಾಯಕತೆ(ಮುಗ್ಧತೆ, ಸೋಮಾರಿತನ)ಯಿಂದಾಗಿ ಎಲ್ಲಾ ಕಾರ್ಯಕ್ಷೇತ್ರಗಳಲ್ಲೂ ಗುಣಮಟ್ಟ ಕುಸಿಯುತ್ತಿದೆ. ಇದನ್ನು ಪತ್ತೆ ಹಚ್ಚಿಕೊಂಡಿರುವ ಮಹಿಳಾ ಉದ್ಯೋಗಿಗಳು. ಔದ್ಯೋಗಿಕ ಕ್ಷೇತ್ರದಲ್ಲಿ ಗುಣಮಟ್ಟ ಕಾಯ್ದುಕೊಳ್ಳುವುದರತ್ತ ಗಮನ ಹರಿಸುವಂತಾಗಿದೆ. ಮನೆಯನ್ನು ಓರಣಗೊಳಿಸಲು ಶ್ರಮವಹಿಸುವ ಪ್ರವೃತ್ತಿ ಮಹಿಳೆಯರಲ್ಲಿರುವುದರಿಂದ ಅದನ್ನು ಉಳಿಸಿಕೊಳ್ಳಲು ಶ್ರಮಪಡುತ್ತಿದ್ದಾರೆ. ಹಾಗಾಗಿಯೇ ಮಹಿಳೆಯರ ನೇತೃತ್ವದಲ್ಲಿ ನಡೆಯುವ ಉದ್ಯಮಗಳು, ಕಲಾಶಾಲೆಗಳು, ನರ್ಸಿಂಗ್ ಹೋಂ, ವಿದ್ಯಾ ಸಂಸ್ಥೆಗಳು ಇತ್ಯಾದಿಗಳಲ್ಲಿ ಶಿಸ್ತು, ಶ್ರದ್ಧೆ ನಿರಂತರ ಪ್ರಯತ್ನ ಕಂಡು ಬರುತ್ತಿವೆ, ಇದರಿಂದ ಮಹಿಳೆಯರ ಬಗ್ಗೆ ಪೂರ್ವಾಗ್ರಹ ಪೀಡಿತ ಅಭಿಪ್ರಾಯ ದೂರವಾಗುತ್ತಿದೆ.

ಬದುಕನ್ನು ನಿಭಾಯಿಸಲು ವ್ಯಾವಹಾರಿಕ ಜ್ಞಾನ ಸ್ತ್ರೀ ಪುರುಷರಿಬ್ಬರಿಗೂ ಅಗತ್ಯ. ವ್ಯಾವಹಾರಿಕವಾಗಿ ಮನುಷ್ಯ ಒಂದಲ್ಲ ಒಂದು ರೀತಿಯಲ್ಲಿ ಬದುಕಿನೊಡನೆ ಹೊಂದಾಣಿಕೆ ಮಾಡಿಕೊಳ್ಳಲೇ ಬೇಕು, ಆದರ್ಶದ

ಡಾ|| ಎಚ್. ಎಸ್. ಉಷಾರಾಣಿ

ಬೆನ್ನು ಹತ್ತಿ ವಾಸ್ತವತೆಯ ಅರಿವಿಲ್ಲದೆ. ಮಾನಸಿಕ ಒತ್ತಡವನ್ನು ಸಹಿಸಿಕೊಳ್ಳಲಾರದೆ ಈ ಬದಕಿನಿಂದಲೇ ಮುಕ್ತವಾಗುವ ಆಲೋಚನೆ ಸರಿಯೇ? ಜೀವನದಲ್ಲಿ ಪ್ರತಿಯೊಬ್ಬರಿಗೂ ಏಳುಬೀಳುಗಳಿವೆ. ಅದನ್ನು ಸಂಯಮ ಸಹನೆಯಿಂದ ಎದುರಿಸುವ ಕಲೆ ಭಾರತೀಯರಾದ ನಮಗೆ ಕರಗತವಾಗಿದೆ. ಆದರೂ ಎಷ್ಟೋ ವಿಷಮ ಪರಿಸ್ಥಿತಿಯಲ್ಲಿ ಅವು ಪ್ರಯೋಜನಕ್ಕೆ ಬಾರದಾಗಿವೆ. ಹಾಗಾಗಿ ಸಂಭವವಿರಬಹುದಾದ ಅನಾಹುತಗಳ ಸಂಖ್ಯೆ ದಿನೇ ದಿನೇ ಹೆಚ್ಚುತ್ತಿವೆ. ಉದಾಹರಣೆಗೆ ವರ್ಗಾವಣೆ ಆಗಲಿಲ್ಲ, ಕೆಲಸ ಸಿಗಲಿಲ್ಲ, ಕೆಲಸ ಖಾಯಂ ಆಗಲಿಲ್ಲ, ಆರ್ಥಿಕವಾಗಿ ಸ್ವತಂತ್ರರಾಗಿದ್ದರೂ ಹಣಕಾಸಿನ ವ್ಯವಹಾರದಲ್ಲಿ ಸ್ವಾತಂತ್ರ್ಯವಿಲ್ಲದಿರುವುದು – ಇದರಿಂದಾಗಬಹುದಾದ ಮಾನಸಿಕ ಹಿಂಸೆ, ಆರೋಪಗಳನ್ನು ಸಹಿಸಿಕೊಳ್ಳಲಾಗದ ಸ್ಥಿತಿ, ಜೀವನದ ಗುಣಮಟ್ಟ ಉಳಿಸಿಕೊಳ್ಳಲಾಗದ ಸನ್ನಿವೇಶಗಳಲ್ಲಿ ಒಂದೋ ವ್ಯಕ್ತಿ ಇಲ್ಲವೇ ಕುಟುಂಬ ಸಮೇತ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಘಟನೆಗಳನ್ನು ದಿನನಿ

ತ್ಯವೂ ಕೇಳುತ್ತಿದ್ದೇವೆ.

ಹಾಸ್ಯ ಪ್ರಜ್ಞೆ ಬದುಕನ್ನು ಹಸನಾಗಿಸುತ್ತದೆ. ಎಂತಹ ಕಠಿಣ ಪರಿಸ್ಥಿತಿಯನ್ನು ಗೆಲ್ಲಲು ಶಕ್ತಿ ನೀಡುವುದು ಹಾಸ್ಯಪ್ರಜ್ಞೆ. ಹೆಚ್ಚಿನವರಲ್ಲಿ ವ್ಯಂಗ್ಯವಾಗಿ ಮಾತನಾಡುವ ಅಭ್ಯಾಸವಿದೆಯೇ ಹೊರತು ಹಾಸ್ಯಮಿಶ್ರಿತ ಮಾತುಕತೆ ತಿಳಿಯದು. ಹೀಗಾಗಿ ಬಹುಬೇಗನೆ ಮಾತು ಮಾತಿಗೂ ಅಪಾರ್ಥ ಕಲ್ಪಿಸುತ್ತಾರೆ. ಇಂತಹ ಸಹೋದ್ಯೋಗಿಗಳನ್ನು ನಾವಿಂದು ಕಾಣುತ್ತಿಲ್ಲವೇ! ಇಂತಹವರಿಂದಾಗಿ ಇಡೀ ವಾತಾವರಣ ಪ್ರತಿ ದಿನವೂ ಹದಗೆಟ್ಟಿರುವುದಿಲ್ಲವೇ! ಇವರು ಜನರ ಒಡನಾಟಕ್ಕೆ ಬದಲಾದಿ ನಿಷ್ಠುರ ಕಟ್ಟಿಕೊಳ್ಳುತ್ತಾರೆ. ಮನುಷ್ಯ ಸಂಘಜೀವಿಯಾದ್ದರಿಂದ ಇತರರ ಸಹವಾಸ, ಸಹಕಾರ ಅನಿವಾರ್ಯ. ಇದರ ಮೌಲ್ಯವನ್ನು ಉಲ್ಲೇಖಿತ ಗುಣದ ಕೊರತೆಯುಳ್ಳವರು ಸಕಾಲದಲ್ಲಿ ಅರಿಯಲಾರರು. ಇಂತಹ ಸ್ವಭಾವದವರನ್ನು ಅವಲಂಬಿಸಿರುವ ಕುಟುಂಬಗಳು ಅದರ ಸಾಧಕ ಬಾಧಕಗಳನ್ನು ಎದುರಿಸುತ್ತಿರುವುದನ್ನು ನೋಡುತ್ತಿದ್ದೇವೆ.

ಬದಲಾಗುತ್ತಿರುವ ಸಮಾಜವು ಸ್ವನಿರ್ಣಯ ಕೈಗೊಳ್ಳುವ ಮಹಿಳೆಯರಿಗೆ ವಿಶೇಷ ಸ್ಥಾನಮಾನ ನೀಡುತ್ತಿದೆ. ಇದುವರೆಗೂ ಸ್ವನಿರ್ಣಯ ತೆಗೆದುಕೊಳ್ಳುವ ಶಕ್ತಿ ಪುರುಷರಿಗೆ ಮಾತ್ರ ಇದೆಯೆಂಬ ನಂಬಿಕೆ ಬೇರೂರಿತ್ತು. ಪುರುಷರ ಸಮಕ್ಕೆ ಸಮಸ್ಯೆಗಳನ್ನೆದುರಿಸುತ್ತಿರುವ ಮಹಿಳೆಯರು ಮತ್ತೊಬ್ಬರ ನಿರ್ಣಯಕ್ಕಾಗಿ ಕಾಯುವಂತಿಲ್ಲ, ಇದರಿಂದ ಸ್ವಂತಿಕೆ ಪ್ರದರ್ಶಿಸಲು ಅವಕಾಶ ದೊರೆತಿದೆ. ಪುರುಷರಲ್ಲೂ ಸ್ವಂತಿಕೆ ಇಲ್ಲದಿರುವುದನ್ನು ಮನಗಂಡಿದ್ದಾರೆ. ಆರ್ಥಿಕವಾಗಿ ದುರ್ಬಲನಾಗಿದ್ದಲ್ಲಿ, ನಡತೆಗೆಟ್ಟಿದ್ದಲ್ಲಿ ಅತನನ್ನು ಸಮಾಜ ಪುರಸ್ಕರಿಸದಿರುವ ಅಂಶಗಳನ್ನು ಪತ್ತೆಹಚ್ಚಿಕೊಂಡಿದ್ದಾರೆ. ಅಷ್ಟೇ ಅಲ್ಲದೆ ತಾನಿಷ್ಟಪಟ್ಟ ಉದ್ಯೋಗಿ | ನಿರುದ್ಯೋಗಿ, ಸ್ವಜಾತಿ | ಅನ್ಯಜಾತಿ ಮಹಿಳೆಯನ್ನು ವರಿಸಿದಲ್ಲಿ ಆತನ ಸಮುದಾಯದವರು ಆತನನ್ನು ವಿರೋಧಿಸಿ ಬಹಿಷ್ಕರಿಸುವುದನ್ನು ಪ್ರತ್ಯಕ್ಷವಾಗಿ ವೀಕ್ಷಿಸುತ್ತಿದ್ದೇವೆ. ಅಂದರೆ ಒಬ್ಬ ಗಂಡಸು ತನ್ನ ಮನ ಬಂದಂತೆ ವರ್ತಿಸಿದಲ್ಲಿ ಅದನ್ನು ಒಪ್ಪಿಕೊಳ್ಳಲು ಈ ಸಮಾಜ ಸಿದ್ಧವಿಲ್ಲ ಎಂಬುದು ಸ್ಪಷ್ಟ. ಆದ್ದರಿಂದ ಕಚೇರಿಯ ವ್ಯವಹಾರದಲ್ಲಾಗಲೀ ಖಾಸಗೀ ಬದುಕಿನಲ್ಲಾಗಲೀ ಅತ್ಯಂತ ವಿವೇಕದಿಂದ ತಾನೇ ಸ್ವತಃ ನಿರ್ಣಯಕ್ಕೆ ಬರುವ ಸವಾಲನ್ನು ಪ್ರಸ್ತುತ ಸಮಾಜ ಮಹಿಳೆಯರ ಮುಂದಿಟ್ಟಿದೆ. ಇದನ್ನು ಸವಾಲಾಗಿ ಸ್ವೀಕರಿಸಿದವರ ವ್ಯಕ್ತಿತ್ವಕ್ಕೆ ವಿಶೇಷ ಮೆರಗು ಬಂದಿರುವುದಲ್ಲದೆ, ಸ್ಥಾನಮಾನಗಳು ಲಭಿಸಿವೆ.

ಸಾಮರ್ಥ್ಯ, ದಕ್ಷತೆಯನ್ನು ಗುರುತಿಸಿ ಪ್ರಶಂಶಿಸಲು ಲಿಂಗಭೇದವಿಲ್ಲ. ತಾಳ್ಮೆ ಹಾಗೂ ಸಾಮರ್ಥ್ಯದ ಪ್ರತೀಕದಂತಿರುವ ಮಹಿಳೆಯರು ಮನೆಯ ಹೊರಗೂ ತಮ್ಮ ಗುಣಗಳನ್ನು ಉಳಿಸಿಕೊಂಡಿದ್ದಾರೆ. ಇತ್ತೀಚೆಗೆ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಉಪನ್ಯಾಸಕಿಯೊಬ್ಬರ ಅನುಭವ ಹೇಗಿತ್ತೆಂಬುದನ್ನು ತಿಳಿಸುತ್ತೇನೆ. ಕಳೆದ ನಾಲ್ಕು ಚುನಾವಣೆಗಳಲ್ಲಿ ಪ್ರಿಸೈಡಿಂಗ್ ಆಫೀಸರ್ ಆಗಿ ನೇಮಕಗೊಂಡಿದ್ದರು. ಅವರು ಕಾರ್ಯ ನಿರ್ವಹಿಸಬೇಕಾಗಿದ್ದ ಸ್ಥಳದಲ್ಲಿ ೨ ಚುನಾವಣಾ ಕ್ಷೇತ್ರಗಳಿದ್ದವು. ಇಬ್ಬರು ಪ್ರಿಸೈಡಿಂಗ್ ಆಫೀಸರ್‌ಗಳು ಪ್ರಾಥಮಿಕ ಶಾಲಾಶಿಕ್ಷಕರು. ಸೇವಾ ಅವಧಿಯಲ್ಲೂ ಹಿರಿಯರು, ಚುನಾವಣಾ ಕಾರ್ಯದಲ್ಲೂ ಅನುಭವ ಪಡೆದವರು. ಆದರೆ ಮೊಟ್ಟ ಮೊದಲಿಗೆ ಪ್ರಿಸೈಡಿಂಗ್ ಆಫೀಸರ್ ಆಗಿ ನೇಮಕಗೊಂಡಿದ್ದರು. ಉಪನ್ಯಾಸಕಿಯ ಮೇಲಧಿಕಾರಿ ಬಹು ಲಘುವಾಗಿ ತನ್ನ ಅಧೀನ ಅಧಿಕಾರಿಗಳನ್ನು ಕಾಣತೊಡಗಿದರು. ಆದರೆ ಒಂದು ದಿನದ ಮಟ್ಟಿಗೆ ತನ್ನೊಡನೆ ಕೆಲಸ ಮಾಡುವವರಲ್ಲಿ ಒಬ್ಬರು ತನ್ನಿಂದ ಮೇಲಿನ ಹುದ್ದೆಯಲ್ಲಿರುವವರು ಎಂಬುದು ಗೊತ್ತಾದೊಡನೆ ಆತನ ಚರ್ಯೆಯಲ್ಲಿ ಬದಲಾವಣೆ ಕಂಡು ಬಂದಿತು. ಚುನಾವಣಾ ಕೆಲಸಗಳು ಗೊತ್ತಿದೆ ಎಂದಾದಾಗ ತನಗೆ ಪ್ರಿಸೈಡಿಂಗ್ ಕೆಲಸ ಗೊತ್ತಿಲ್ಲವೆಂದು ಬಿಚ್ಚು ಮನಸ್ಸಿನಿಂದ ತನ್ನ ಅಳಲನ್ನು ತೋಡಿಕೊಂಡರು. ಅಷ್ಟೇ ಏಕೆ, ಪಕ್ಕದ ಕ್ಷೇತ್ರದಲ್ಲಿದ್ದವರಿಗೂ ವಿಷಯ ತಿಳಿಸಿದರು. ಅವರು ಉಪನ್ಯಾಸಕಿಯ ಮಾರ್ಗದರ್ಶನ ಪಡೆದುಕೊಳ್ಳಲು ಸಂಕೋಚವಿಲ್ಲದೆ ಮುಂದೆ ಬಂದರು. ಇದರಿಂದ ಅಲ್ಲಿಯ ಸಹೋದ್ಯೋಗಿಗಳ (ಪ್ರಾಥಮಿಕ ಶಾಲಾ ಶಿಕ್ಷಕ | ಶಿಕ್ಷಕಿಯರು) ಮೆಚ್ಚುಗೆಗೆ ಪಾತ್ರರಾದರಲ್ಲದೆ, ಸ್ಥಳೀಯ ಮುಖಂಡರ ಪ್ರಶಂಸೆಗೊಳಗಾದರು. ಇಲ್ಲಿ ಗಮನಿಸಬೇಕಾದುದು ವಿವಿಧ ದರ್ಜೆ ಉದ್ಯೋಗಿಗಳ ಮನೋಭಾವವನ್ನು.

ವಿದ್ಯಾವಂತರಾಗಲೀ, ಅವಿದ್ಯಾವಂತರೇ ಆಗಿರಲಿ ಸಾಮರ್ಥ್ಯ, ದಕ್ಷತೆಯನ್ನು ಗುರುತಿಸಲು ಹಿಂದೇಟು ಹಾಕುವುದಿಲ್ಲ ಎಂಬುದು ವಾಸ್ತವ ಅಲ್ಲವೆ?

ಹೆಚ್ಚಿನವರಿಗೆ ಉದ್ಯೋಗ ನಾಮಮಾತ್ರಕ್ಕೆ ಅಂದರೆ ಸಮಾಜದಲ್ಲಿ ಸ್ಥಾನ ಗಳಿಸಲಷ್ಟೆ. ವೃತ್ತಿಯಲ್ಲಿ ಬೌದ್ಧಿಕವಾಗಿ ಬೆಳೆಯಬೇಕೆಂಬ ಹಂಬಲವುಳ್ಳವರ ಸಂಖ್ಯೆ ಹತ್ತರಲ್ಲಿ ಕನಿಷ್ಟ ಎರಡು, ಗರಿಷ್ಟ ನಾಲ್ಕು ಮಾತ್ರ. ಉದಾಹರಣೆಗೆ ಅಧ್ಯಾಪಕರು, ಉದ್ಯೋಗಸ್ಥರ ಮಾತುಕತೆಗಳೆಲ್ಲವೂ ಸಾಂಸಾರಿಕ ವಿಚಾರಗಳಿಗೆ ಸೀಮಿತ. ಅಂದರೆ ತಮ್ಮ ಖಾಸಗೀ ಕೆಲಸಕ್ಕೆ ಗಮನ ಹರಿಸಲು ಸಮಯ, ಆಸಕ್ತಿ ಇಲ್ಲ. ಹೀಗಾಗಿ ಇಂದು ಯಾವುದೇ ಕಚೇರಿಗಳಲ್ಲಾದರೂ ಕರ್ತವ್ಯಪ್ರಜ್ಞೆಯಿಂದ ನಿಷ್ಪಾಕ್ಷಂತ ಸೇವೆ ಸಲ್ಲಿಸುವ ಉದ್ಯೋಗಸ್ಥರನ್ನು ಕಾಣಲಾಗುತ್ತಿಲ್ಲ, ಇದ್ದರೂ ಅಂತಹವರು ಕಣ್ಣಿಗೆ ಬೀಳುವುದಿಲ್ಲ.

ಔದ್ಯೋಗಿಕ ಕ್ಷೇತ್ರದಲ್ಲಿ ಅಸೂಯೆ, ಸಣ್ಣತನಗಳು ತಾಂಡವವಾಡುತ್ತಿವೆ. ಅಸೂಯೆ ಎಂದಾಕ್ಷಣ ಸ್ತ್ರೀ ಸ್ವಭಾವ ಎಂಬುದಾಗಿ ಪರಿಗಣಿಸುವುದು ವಾಡಿಕೆ. ಆದರೆ ಸ್ವಾವಲಂಬಿ ಮಹಿಳೆಯರ ಅನಿಸಿಕೆ ಭಿನ್ನವಾಗಿದೆ. ಅಸೂಯಾಪರ ಗುಣ ಪುರುಷರಲ್ಲಿ ಒಂದು ಕೈ ಮೇಲೆಂದರೆ ತಪ್ಪಾಗಲಾರದು. ಮತ್ತೊಬ್ಬ ತನ್ನ ವೃತ್ತಿ ಮತ್ತು ಖಾಸಗಿ ಜೀವನದಲ್ಲಿ ಏಳಿಗೆ ಹೊಂದುವುದನ್ನು ಸಹಿಸದ ಪುರುಷರ ಸಂಖ್ಯೆ ಅಪಾರ. ಪತಿ–ಪತ್ನಿ ಉದ್ಯೋಗದಲ್ಲಿದ್ದರಂತು ಅಂತಹವರ ಬಗ್ಗೆ ಅಸೂಯೆ ಹೇಳತೀರದು. ತಮ್ಮ ಸ್ತ್ರೀಯರು ಉದ್ಯೋಗಕ್ಕೆ ಸೇರಿದರೆ ತಮ್ಮ ಘನತೆಗೆ ಕುಂದುಂಟಾಗುವುದೆಂದು ಭಾವಿಸಿರುವವರು, ತಾವು ವೃತ್ತಿಯಲ್ಲಿ ಹೆಚ್ಚಿನದನ್ನು ಸಾಧಿಸಲು ಇಚ್ಛಿಸುವುದಿಲ್ಲ. ಕೇವಲ ಮತ್ತೊಬ್ಬರ ಏಳಿಗೆಯನ್ನು ಕಂಡು ಕರುಬುತ್ತಿರುತ್ತಾರೆ. ಅಷ್ಟೇ ಏಕೆ, "ಮನೆ ಹಾಳು ಬುದ್ಧಿ" ಹೇಳಿಕೊಡುವುದರಲ್ಲಿ ನಿಸ್ಸೀಮರು. ಉದಾಹರಣೆಗೆ ಉದ್ಯೋಗಸ್ಥ ಮಹಿಳೆ ಸಂದರ್ಭ ಬಂದಲ್ಲಿ ಬಿಚ್ಚು ಮನಸ್ಸಿನಿಂದ ತನ್ನ ಪತಿಯ ಬಗ್ಗೆ ಟೀಕೆ ಮಾಡಿದ ಪಕ್ಷದಲ್ಲಿ ಅವರ ನಡುವೆ ಸಂಬಂಧ ಅಷ್ಟಕಷ್ಟೆ ಎಂಬ ನಿರ್ಧಾರಕ್ಕೆ ತಾವು ಬರುವುದಲ್ಲದೆ, ಇತರರು ಆ ನಿರ್ಧಾರಕ್ಕೆ ಬರುವಂತೆ ಮಾಡುವ ಕಾರ್ಯದಲ್ಲಿ ಆಸಕ್ತರು. ಆಕೆಯನ್ನು ನೋಡುವ ದೃಷ್ಟಿಕೋನವೇ ಬದಲಾಗುತ್ತದೆ. ಹೀಗಾಗಿ ಮುಕ್ತ ಚರ್ಚೆ ಸಾಧ್ಯವಾಗುವುದಿಲ್ಲ. ಇಂತಹ ಸಂಕುಚಿತ ಮನೋಭಾವ ಅಸೂಯಾ ಪ್ರವೃತ್ತಿಗಳನ್ನು ಪುರುಷರ ಮೇಲೆ ಆರೋಪಿಸದೆ, ಇವೆಲ್ಲವೂ ಮನುಷ್ಯ ಸ್ವಭಾವ ಎಂಬ ನಿರ್ಣಯಕ್ಕೆ ಬರುವಂತಾಗಿದ್ದಾರೆ. ಉದ್ಯೋಗಸ್ಥ ಮಹಿಳೆಯರು ಇದಕ್ಕೆ ಕಾರಣ, ಅವರಲ್ಲುಂಟಾಗಿರುವ ಸಾಮಾಜಿಕ ಪ್ರಜ್ಞೆ.

ಹೀಗೆ ಇತ್ತೀಚಿನವರೆಗೂ ಒಂದು ಭೋಗವಸ್ತುವಿನಂತಿದ್ದ ಸ್ತ್ರೀ ಸ್ವಾವಲಂಬಿಯಾಗುತ್ತಿರುವುದರಿಂದ ಆಕೆ ವ್ಯಕ್ತಿ ಎಂಬ ಸ್ಥಾನಕ್ಕೆ ಅರ್ಹಳಾಗುತ್ತಿದ್ದಾಳೆ. ಬದಲಾಗುತ್ತಿರುವ ಸಮಾಜದಲ್ಲಿ ಗುಣಕ್ಕಿಂತ ಹಣಕ್ಕೆ ಪ್ರಾಶಸ್ತ್ಯ ಎಂಬುದು ಆಕೆಯ ಅರಿವಿಗೆ ಬಂದಿದೆ. ಹಣ ಸಂಪಾದನೆಯೊಂದಿಗೆ ಗುಣವನ್ನು ಕಾಪಾಡಿಕೊಳ್ಳುತ್ತಿದ್ದರೂ, ಹಲವು ಆರೋಪಗಳನ್ನು ಎದುರಿಸಬೇಕಾಗಿದೆ. ಆದಾಗ್ಯೂ ಸ್ವಾವಲಂಬಿತನದಿಂದಾಗಿ ಆಕೆಯ ವ್ಯಕ್ತಿತ್ವಕ್ಕೆ, ಪ್ರತಿಷ್ಠೆಗೆ, ಸ್ಥಾನಮಾನಗಳಿಗೆ ಧಕ್ಕೆಯುಂಟಾಗಿಲ್ಲ. ಹೆಚ್ಚಿನವರು ಆರ್ಥಿಕವಾಗಿ ದುರ್ಬಲರೆನಿಸಿರುವುದರಿಂದ, ಆರ್ಥಿಕವಾಗಿ ಸಬಲರಾಗಲು ಪ್ರಯತ್ನಿಸುತ್ತಿದ್ದಾರೆ.

ಕೊನೆಯದಾಗಿ, ಔದ್ಯೋಗಿಕ ಕ್ಷೇತ್ರಗಳಲ್ಲಿ ಪ್ರಗತಿ ಕಂಡು ಬರದಿರಲು ರಾಜಕಾರಣಿಗಳ ಸ್ವಾರ್ಥವೆ ಕಾರಣ. ಅಧಿಕಾರ ದಾಹದಿಂದಾಗಿ ತಮ್ಮೊಳಗೆ ಸದಾ ಕಾಲವೂ ಕಚ್ಚಾಡುತ್ತಿರುವ ರಾಜಕಾರಣಿಗಳಲ್ಲಿ ಸೇವಾ ಮನೋಭಾವ ಕಂಡುಬರುವುದಾದರೂ ಹೇಗೆ? ತಮ್ಮನ್ನು ಉದ್ಧಾರ ಮಾಡಿಕೊಳ್ಳಲಾಗದವರು ಇತರರನ್ನು ಉದ್ಧರಿಸಿಯಾರೆ? ಹೆಣ್ಣನ್ನು ಕೇವಲ ಹೆಣ್ಣನಂತೆ ನೋಡಿಯಾರಷ್ಟೆ. ಹೆಣ್ಣಿನ ಬೇಕು ಬೇಡಗಳನ್ನು ಕಡೆಗಣಿಸಿರುವ ರಾಜಕಾರಣಿಗಳು ದೇಶಕ್ಕೆ ಮಾರಕ. ಕುಟುಂಬದ ಸ್ವಚ್ಛತೆ ಸ್ತ್ರೀಯನ್ನು ಅವಲಂಬಿಸಿರುವಂತೆ, ಸಮಾಜ ಹಾಗೂ ದೇಶದ ಸ್ವಚ್ಛತೆಯು ಆಕೆಯನ್ನೇ ಅವಲಂಬಿಸಿದೆ. ಅಂದ ಮೇಲೆ ಬದಲಾಗುತ್ತಿರುವ ಪ್ರಪಂಚದ ಅರಿವು ಆಕೆಗಿರಬೇಕಲ್ಲವೆ? ಉದಾಹರಣೆಗೆ ಶಿಕ್ಷಣ, ಆರೋಗ್ಯ ಮತ್ತು ಉದ್ಯೋಗ, ಇದರ ಸಲುವಾಗಿ ಹಲವು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದೇನೊ ನಿಜ.

ಅದು ಅಗತ್ಯವಿರುವವರಿಗೆ ತಲುಪುತ್ತಿದೆಯೇ? ಹಾಗೆಯೇ ಉದ್ಯೋಗಸ್ಥ ಮಹಿಳೆಯರು ಮನೆಯ ಒಳಗೂ, ಹೊರಗೂ ದುಡಿಯುತ್ತಿದ್ದಾರೆ(ಹೆಚ್ಚಿನವರಿಗೆ ಮನೆಯವರ ಸಹಕಾರವಿಲ್ಲ). ಇಂತಹವರಿಗೆ ಅಗತ್ಯವಾಗಿ ಬೇಕಾದ ಸೌಕರ್ಯಗಳಾದ ಶಿಶುಕೇಂದ್ರ, ವಸತಿ ನಿಲಯ, ಶೌಚಾಲಯ ವ್ಯವಸ್ಥೆ • ಕಲ್ಪಿಸುವುದರತ್ತ ಗಮನ ಹರಿಸಿದ್ದಾರೆಯೇ? ಗಮನ ಹರಿಸಿದ್ದಲ್ಲಿ ಅದರ ಪ್ರಯೋಜನ ಪಡೆಯುತ್ತಿರುವವರು ನಗರವಾಸಿಗಳೇ ವಿನಃ ಗ್ರಾಮಾಂತರ ಪ್ರದೇಶಗಳಲ್ಲಿರುವವರಲ್ಲ. ಹಾಗಾದರೆ ಗ್ರಾಮೀಣ ಪ್ರದೇಶಗಳಲ್ಲಿ ದುಡಿಯುವವರನ್ನು ಕೇಳುವವರು ಯಾರು? ಈ ನಿಟ್ಟಿನಲ್ಲಿ ಶ್ರಮಿಸಬೇಕಾದವರು ಯುವ ರಾಜಕಾರಣಿಗಳು. ಇವರೂ ಹಳೆಯ ರಾಜಕಾರಣಿಗಳ ಜಾಡನ್ನು ಹಿಡಿಯುವಂತಾದರೆ ಸಾಮಾಜಿಕ ಪ್ರಗತಿ ಸಾಧ್ಯವೆ? ಎಂಬುದು ಇಂದು ಹಲವರನ್ನು ಕಾಡುತ್ತಿರುವ ವಿಚಾರ.

0 0 0

## ಸಾಯೋ ಆಟ

ಇಂದು ವರ್ತಮಾನ ಪತ್ರಿಕೆಯಲ್ಲಿ ವಿಮಾನ ದುರಂತದಲ್ಲಿ ಸತ್ತವರ ಶವಗಳನ್ನು ನೋಡಿದೆ. ಆ ಕರಕಲಾದ ಮಾಂಸ ಮುದ್ದೆಗಳು ಅನೇಕ ಕಥೆಗಳನ್ನು ಹೇಳಿದವು. ನೆನಪಿನಾಳಕ್ಕೆ ಇಳಿದಾಗ ಕಣ್ಮುಂದೆ ತೇಲಿ ಬಂದ ಗೆಳತಿ ಕೋಳಿ ಕಸ ಕೆದರುವ ಹಾಗೆ ನನ್ನ ಬಾಲ್ಯದ ನೆನಪನ್ನು ಕೆದಕಿದಳು ; ಕಲಕಿದಳು ನನ್ನ ಹೃದಯ.

ಒಂದು ದಿನ ಅವಳು ಯಾಕೋ ಬೇಸರದಿಂದಿದ್ದಳು ; ನನಗೂನೂ ಬೇಸರವಾಗಿತ್ತು ಮನೆಯಲ್ಲಿ. ಇಬ್ಬರ ಮನಗಳೂ ನೊಂದಿದ್ದವು ಹೀಗಾಗಿ ನಾವಿಬ್ಬರೂ ಕೂಡಿ ಒಂದು ತೀರ್ಮಾನಕ್ಕೆ ಬಂದೆವು, ಈ ಜಗತ್ತಿನಲ್ಲಿ ಹೆಣ್ಣು ಮಕ್ಕಳಿಗೆ ಪುರಸ್ಕಾರವಿಲ್ಲ ; ನಾವು ಇನ್ನು ಇಲ್ಲಿರಬಾರದು ಎಂದು ಬಹಳ ಯೋಚನೆ ಮಾಡಿ ಇಬ್ಬರಲ್ಲಿದ್ದ ಹಣ ಕೂಡಿಸಿದೆವು. ಒಟ್ಟು ಒಂದೂವರೆ ರೂಪಾಯಿ! ಒಂದು ರೂಪಾಯಿಯ ಇಡ್ಲಿ ಐವತ್ತು ಪೈಸೆಯ ಇಲಿ ಪಾಷಾಣ ತಂದು ನಮ್ಮ ಮನೆಯ ಬಚ್ಚಲು ಮನೆಯಲ್ಲಿ ಇಬ್ಬರೂ ಬಾಗಿಲು ಹಾಕಿ; ಒಳಗೆ ಇಲಿ ಪಾಷಾಣ ಇಡ್ಲಿಯ ಜೊತೆಗೆ ಹಚ್ಚಿ ತಿಂದೆವು. ಅವಳು ಹೇಳಿದಳು ನಾಳೆ ಇಷ್ಟು ಹೊತ್ತಿಗೆ ನಾವು ಇಲ್ಲ ಇರುವುದೇ ಇಲ್ಲ, ಇರಲಿ ಇವರೆಲ್ಲಾ ಹಾಯಾಗಿ, ಸುಖವಾಗಿ.

ಅಷ್ಟು ಹೊತ್ತಿಗೆ ನಮ್ಮ ಹುಡುಕುತ್ತಾ ಬಂದ ಅಮ್ಮ ಬೈದಳು; ಇಲ್ಲೇನು ಕೆಲಸ ನಿಮಗೆ ಒಳಗೆ ನಡೆಯಿರಿ ಎಂದು. ಅವಳು ತನ್ನ ಮನೆಗೆ ಹೋದಳು, ನಾನು ನಮ್ಮ ಮನೆಯಲ್ಲಿ ಸಾವು ನಿರೀಕ್ಷಿಸುತ್ತಾ ಕುಳಿತೆವು. ಮರುದಿನವಾದರೂ ಆ ಸಾವು ಬರಲೇ ಇಲ್ಲಾ .................... ನಾನು ಸತ್ತಿರಬಹುದೆಂದು ಅವಳು ಮತ್ತೆ ಬಂದಳು ನಮ್ಮ ಮನೆಗೆ "ಅರೇ ........... ನೀನೂ ಸತ್ತಿಲ್ಲವಾ? ನಾನೂ ಸತ್ತಿಲ್ಲ!!"

ಆ ಇಲಿ ಪಾಷಾಣ ಕೊಟ್ಟ ಅಂಗಡಿಯವ ನಮಗೆ ಮೋಸ ಮಾಡಿದ ಎಂದು ಬೈದುಕೊಳ್ಳುತ್ತಾ ಸುಮ್ಮನಾದೆವು. ಅಂದಿನ ಆ ಹುಡುಗಾಟಿಕೆಗೆ ಇಂದು ನಗುತ್ತೇನೆ....................

ಆದರೆ ಆ ಗೆಳತಿ ಮೊನ್ನೆ ಮೊನ್ನೆ ನಿಜವಾಗಿಯೂ ಸತ್ತಿದ್ದಾಳೆ; ನನ್ನೊಬ್ಬಳನ್ನೇ ಬಿಟ್ಟು. ಮದುವೆಯಾಗಿ ಗಂಡನ ಮನೆಗೆ ಹೋದ ಗೆಳತಿ ಮಗುವನ್ನೆತ್ತಿಕೊಂಡು ಬಂದಿದ್ದಳೊಮ್ಮೆ. ಮತ್ತೊಮ್ಮೆ ಅವಳು ಬರಲೇ ಇಲ್ಲ. ಮಗುವನ್ನು ತೊಡೆಯಲ್ಲಿ ಸಿಕ್ಕಿಸಿ ಸೀಮೆ ಎಣ್ಣೆ ಸುರಿದು ಸುಟ್ಟುಕೊಂಡು ದೇವರ ಮುಂದೆ ನಮಸ್ಕರಿಸುವ ಭಂಗಿಯಲ್ಲಿ ಮಾಂಸದ ಮುದ್ದೆಯಾದ ಅವಳ ಸಾವಿಗೆ ಕಾರಣ ತಿಳಿಯಲಿಲ್ಲ. ನನಗೆ; ನಮ್ಮಂಥ ಸೂಕ್ಷ್ಮ ಹೃದಯಿಗಳಿಗೆ ಇದೊಂದೇ ಮಾರ್ಗವೇ?!

ಮಂಜುಳಾ ಅಮರನಾಥ

# ಬಾನುಲಿ ನಾಟಕ ರಚನಾ ಶಿಬಿರ

ಗೀತಾ

ಆಕಾಶವಾಣಿಯ ಸಹಕಾರದೊಂದಿಗೆ ೨೬.೫.೯೦ ರಂದು ಕರ್ನಾಟಕ ಲೇಖಕಿಯರ ಸಂಘವು ಮಹಿಳೆಯರಿಗೆ "ಬಾನುಲಿ ನಾಟಕ ರಚನಾ ಶಿಬಿರ" ವನ್ನೇರ್ಪಡಿಸಿತ್ತು. ಬಾನುಲಿಯ ಪ್ರಾಂಗಣದಲ್ಲೇ ನಡೆದ ಈ ಶಿಬಿರವನ್ನು ಉದ್ಘಾಟಿಸುತ್ತಾ, ಕ. ಲೇ. ಸಂಘದ ಅಧ್ಯಕ್ಷೆ ಶ್ರೀಮತಿ ಹೇಮಲತಾ ಮಹಿಷಿ, ಸ್ತ್ರೀಯರು ಪುರುಷ ವಿಮರ್ಶಕರ ಟೀಕೆಗಳನ್ನು ಸವಾಲೆಂದು ಪರಿಗಣಿಸದೆ ನಾಟಕ ರಚನೆಯೆಂದರೆ ಹಿಂಜರಿಯಲು ಕಾರಣ ಹೊರ ಪ್ರಪಂಚದ ಅನುಭವದ ಕೊರತೆಯಾದರೆ, ಬಾನುಲಿ ನಾಟಕಗಳ ತಂತ್ರದ ಅಜ್ಞಾನ ರೇಡಿಯೋ ನಾಟಕಗಳಿಂದ ದೂವಿರಲು ಕಾರಣ ಎಂದರು. ಈ ಬಗ್ಗೆ ಲೇಖಕಿಯರಿಗೆ ಅರಿವನ್ನುಂಟಮಾಡುವುದಲ್ಲದೆ, ರಚನಾಕಲೆಯನ್ನೂ ಉತ್ತಮಗೊಳಿಸುವುದು ಶಿಬಿರದ ಗುರಿಯೆಂದರು.

ಬಾನುಲಿ ನಾಟಕಗಳಲ್ಲೂ ಅಭಿವ್ಯಕ್ತಿ ಮಾಧ್ಯಮವಿದೆಯೆನ್ನುತ್ತಾ ಭಾಷಣ ಆರಂಭಿಸಿದ ನಿಲಯದ ನಿರ್ದೇಶಕಿ ಶ್ರೀಮತಿ ಜ್ಯೋತ್ಸ್ನಾ ಕಾಮತ್ ರೇಡಿಯೋ ನಾಟಕಗಳು ಸೃಜನಶೀಲವೂ ಹೌದೆಂದರು. ಬಾನುಲಿ ಬರವಣಿಗೆಯ ಪರಿಚಯ ಎಷ್ಟೋ ಜನ ಪುರುಷ ಸಾಹಿತಿಗಳಿಗೂ ಇಲ್ಲವೆನ್ನುತ್ತಾ, ಶಿಬಿರಾರ್ಥಿಗಳಿಗೆ ಉಪಯುಕ್ತ ಮಾಹಿತಿಗಳನ್ನು ನೀಡಿದರು. ಸಂಗೀತದ ನಂತರ ಅತ್ಯಂತ ಜನಪ್ರಿಯವೆನಿಸಿರುವ ಈ ನಾಟಕಗಳೆಡೆಗೆ ಲೇಖಕಿಯರ ನಿರಾಸಕ್ತಿ ವಿಷಾದನೀಯವೆಂದು ನುಡಿದರು. ರಂಗನಾಟಕಗಳಂತೆ ಉಡುಗೆ, ರಂಗಸಜ್ಜಿಕೆಗಳನ್ನಪೇಕ್ಷಿಸದ ಈ ನಾಟಕಗಳಿಗೆ ಶಬ್ದಗಳೇ ಜೀವಾಳ, ಸಶಕ್ತ ಸಂಭಾಷಣೆ ಪರಿಣಾಮಕಾರಿ ಧ್ವನಿಯಲ್ಲಿ, ನಿರ್ದಿಷ್ಟ ಸಂದೇಶ, ಭಾವಗಳಿಂದ ಮೂಡಿಬರಬೇಕೆಂದರು. ಎಂಥದೇ ವಸ್ತುವಾದರೂ, ಕಡಿಮೆ ಅವಧಿ ಹೊಂದಿದ್ದು, ಎಂತಹ ಕಥಾವಸ್ತುವಾದರೂ ಚುರುಕಾದ ಚಿಕ್ಕ ಸಂಭಾಷಣೆಗಳು, ಕಡಿಮೆ ಪಾತ್ರಗಳು ಅತ್ಯವಶ್ಯವೆಂದರು. ಆಕಾಶವಾಣಿಗೆ ಮಡಿವಂತಿಕೆಯಿಲ್ಲವಾದರೂ, ಬಾನುಲಿ ಬಹುಜನರನ್ನು ತಲುಪುತ್ತದೆಯಾದ್ದರಿಂದ ಕೆಲ ಅಂಶಗಳನ್ನು ಕೈಬಿಡಬೇಕಾಗುತ್ತದೆ, ಹಿಂಸೆಗೆ ಪ್ರಚೋದಿಸುವ, ವಿವಾಹ ವಿಚ್ಛೇದನಗಳಿಗೆ ಉತ್ತೇಜಿಸುವಂಥ ಅಂಶಗಳಿಗೆ ಪ್ರಾಶಸ್ತ್ಯ ಕಡಿಮೆ ಎಂದು ತಿಳಿಸಿದರು. ವ್ಯಕ್ತಿದೂಷಣೆ, ವರ್ಗ, ಜಾತಿ ಹೆಸರಿನಿಂದ ನಿಂದಿಸುವಂಥ ತಪ್ಪುಗಳನ್ನು ಲೇಖಕಿಯರು ಮಾಡಬಾರದೆಂದು ಕಿವಿಮಾತು ಹೇಳುತ್ತಾ ಪ್ರಚಲಿತ ಸಾಮಾಜಿಕ ಸಮಸ್ಯೆಗಳ ಮೇಲೆ ಚೆಲ್ಲುವ ಸ್ತ್ರೀ ರಚನೆಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಪರ್ಧೆಗೆ ಬರಲೆಂಬ ಆಶಯದೊಂದಿಗೆ ಶ್ರೀಮತಿ ಕಾಮತ್ ತಮ್ಮ ಮಾತು ಮುಗಿಸಿದರು.

ಬಾನುಲಿ ನಾಟಕಗಳ ನಿರ್ದೇಶನದಲ್ಲಿ ಹೆಸರಾದ ಶ್ರೀಮತಿ ಯಮುನಾಮೂರ್ತಿ ನಾಟಕಗಳ ಉದಾಹರಣೆಗಳೊಂದಿಗೆ ಪರಿಣಾಮಕಾರಿಯಾದ ಭಾಷಣ ನೀಡಿದರು. ಪಂಡಿತ, ಪಾಮರರೆನ್ನದೆ ಅಂತಸ್ತು, ವರ್ಗ ಭೇದವಿಲ್ಲದೆ ಎಲ್ಲರನ್ನೂ ತನ್ನತ್ತ ಸೆಳೆದುಕೊಳುವ ಶಕ್ತಿ ಬಾನುಲಿ ನಾಟಕಗಳಿಗಿದೆ ಆದರೂ ಹೆಚ್ಚು ಪ್ರಚಾರವಿಲ್ಲದಿರುವುದರಿಂದ ಈ ಕ್ಷೇತ್ರದಲ್ಲಿ ಮಹಿಳೆಯರ ಆಸಕ್ತಿ ಕಡಿಮೆ ಎಂದರು. ರಂಗ ನಾಟಕಗಳಿಗೂ ಬಾನುಲಿ ನಾಟಕಗಳಿಗೂ ಇರುವ ವ್ಯತ್ಯಾಸ, ಬಾನುಲಿ ನಾಟಕಗಳ ಪ್ರಸಾರದಲ್ಲಿರುವ ಅನುಕೂಲತೆಯನ್ನು ಮನದಟ್ಟಾಗುವಂತೆ ತಿಳಿಸಿದರು.

ಬಾನುಲಿ ರೂಪಾಂತರಗಳಲ್ಲಿ ಎತ್ತಿದ ಕೈ ಎನಿಸಿದ ಶ್ರೀಮತಿ ಎಚ್. ಎಸ್. ಪಾರ್ವತಿಯವರು ಬಾನುಲಿ ರೂಪಾಂತರ ಬಾನುಲಿ ನಾಟಕಕ್ಕಿಂತಲೂ ಪ್ರಥಮ ಜನ್ಮ ಪಡೆದಿದ್ದು ಎಂದರು. ರೂಪಾಂತರದ ಮೂಲ ಯಾವುದಾದರೂ ನಾಟಕೀಯ ಅಂಶಕ್ಕೆ ಹೆಚ್ಚು ಒತ್ತುಕೊಡಬೇಕಾದುದರಿಂದ ಬದಲಾವಣೆಗಳಿರುತ್ತವೆ. ಪ್ರತಿಮೆ ಪ್ರತೀಕಗಳಿಗೆ ಅಗತ್ಯವಿದ್ದಷ್ಟು ಒತ್ತುಕೊಡಬೇಕೆಂದರು. ಅನುವಾದ ಮಾಡುವಲ್ಲಿ ಎದರಾಗುವ ಸಮಸ್ಯೆಗಳನ್ನು ವಿಶ್ಲೇಷಿಸಿದರು.

"ಗುಳಿಗೆ", "ನಳಿನಿಯ ತಂದೆ" ಎಂಬ ೨ ನಾಟಕಗಳನ್ನು ಆಲಿಸಿದ ಶಿಬಿರಾರ್ಥಿಗಳಲ್ಲಿ ಬಾನುಲಿ ನಾಟಕಗಳ ಬಗ್ಗೆ ಸ್ಪಷ್ಟ ಕಲ್ಪನೆ ಮೂಡಲು ಸಹಾಯಕವಾಯ್ತು. ಇಂತಹ ಶಿಬಿರಗಳು ಅಗತ್ಯ ಎಂಬ ಏಕಾಭಿಪ್ರಾಯದೊಂದಿಗೆ ಶಿಬಿರ ಮುಕ್ತಾಯವಾಯಿತು.

# ಗಾಂಧಾರೀ ಉವಾಚ

ಸೋದರೀ
ನೀನು ನನ್ನನ್ನೇ
ಮಾಡಿಕೊಳ್ಳದಿರು ಮಾದರಿ,
ಸುಳ್ಳು ಕಣೇ ಈ ಜನರ ವಿಚಾರ
ಗೋಚರಿಸಲಿಲ್ಲ ಇವರಿಗೆ
ನನ್ನ ಮನದ ವಿಕಾರ,



ಆ ದಿನ
ನಾನು ಕಣ್ಣಿದ್ದೂ ಕುರುಡಾದ ದಿನ
ಜನರೆಲ್ಲಾ 'ಭಲೆ ಭಲೆ' ಎಂದು
ತಟ್ಟಿದರು ಬೆನ್ನ,
ಕೊಟ್ಟರು 'ಸತಿ ಶಿರೋಮಣಿ'
ಎಂಬ ಬಿರುದನ್ನ,
ಅರಿಯಲಿಲ್ಲವರು
ಎದೆಯಾಳದ ಅಳಲನ್ನ

ಬಾಹ್ಯ ಕಣ್ಣುಗಳಿದ್ದೇನು ಬೆಲೆ?
ಕನಸುಗಳ ಕದವ ಮುಚ್ಚಿಕೊಂಡೆ
ಬಿಚ್ಚಲಾಗದ ಪಟ್ಟಿ ಕಟ್ಟಿಕೊಂಡೆ.

ಹದಿಹರೆಯದ ಕಂಗಳಲ್ಲಿ
ನೂರು ಹೊಂಗನಸುಗಳು ತುಂಬಿದ್ದವು,
ಅಂಗ ಅಂಗಗಳೂ ಸಂಗಡಿಗನ ಬಯಸ್ಸಿದ್ದವು,
'ಎಷ್ಟು ಚೆಂದವಿದ್ದೀ' ಎಂದು ಚುಂಬಿಸುವ
ಮಿಂಚು ಕಂಗಳ ಸೊಗಸುಗಾರನ
ಮನಸು ಕನಸಿತ್ತು.

ಸೋದರೀ, ನೀನು ನನ್ನನ್ನೇ
ಮಾಡಿಕೊಳ್ಳದಿರು ಮಾದರಿ
ಹುಡುಕಿಕೋ ನೀನೇ ನಿನ್ನ ದಾರಿ.
ನಡುವೆ ತಡೆಯುವವರ ತಳ್ಳಿ
ಹಬ್ಬಲಿ ನಿನ್ನ ಬಾಳ ಬಯಕೆಯ ಬಳ್ಳಿ
ಪ್ರೀತಿಯ ಚಪ್ಪರವಿರುವಲ್ಲಿ
ಆಸೆಯ ನೀರು ಸುರಿವಲ್ಲಿ.

ಬಂಗಾರದ ಜಿಂಕೆಗೆ ಬಡಿದ ಸಿಡಿಲು
ಭೀಷ್ಮನ ಸವಾಲು,
ಅನಿವಾರ್ಯಗಿ ನಾನಾಗಬೇಕಾಯ್ತು
ಧೃತರಾಷ್ಟ್ರನ ಅರ್ಧಪಾಲು.

ಇಂದಿರಾ ಕನಕೇಶ್

ನನ್ನನ್ನೆ ಕಾಣಲಾಗದ ಸಖ
ನನಗುಣಿಸಿಯಾನೆ ಸುಖ?
ನೋಡಬೇಕಿತ್ತೇ ಆ ಕಣ್ಣಿಲ್ಲದ ಮುಖ?
ಕನಸುಗಳಿಗೆ ಆಸೆಗಳಿಗೆ ಕುರುಡು ಬಡಿದ ಮೇಲೆ.

# ಅಸಹಾಯ ವಿದ್ಯಾರ್ಥಿನಿ

ಎಳೆಯ ವಯಸ್ಸಿನ ಬಾಲೆ ಶಾಂತಿ ಚೂಟಿ ಹುಡುಗಿ. ಹತಾಷೆಯಿಂದ ಕೈ ಚಲ್ಲಿ ಮನೆಗೆಲಸದ ಹೊರಗೆ ಹೆಗಲೊಡ್ಡಿದ್ದಾಳೆ. ಏಳನೇ ತರಗತಿಯಲ್ಲಿ ಉತ್ತಮ ಅಂಕಗಳನ್ನು ಗಳಿಸಿ ಉತ್ತೀರ್ಣಳಾದ ಶಾಂತಿ ಇತರ ಗೆಳತಿಯರಂತೆ ಮುಂದೆ ಓದುವ ಸಂಭ್ರಮದಿಂದ ವಂಚಿತಳಾಗಿ ನಿರಾಶೆಯ ನಿಟ್ಟುಸಿರು ಬಿಡುತ್ತಿದ್ದಾಳೆ.

ಶಾಂತಿ ಪಾದರಸದಂತ ಹುಡುಗಿ ಹತ್ತು ಹೊಡೆಯುವುದರೊಳಗೆ ಮನೆಯ ಎಲ್ಲಾ ಕೆಲಸಗಳನ್ನು ಮುಗಿಸಿ ಬಿಡುತ್ತಾಳೆ. ಪಾತ್ರೆ ತೊಳೆಯುವುದು, ಮನೆ ಶುಚಿಗೊಳಿಸುವುದು, ಅನ್ನ ಸಾರು ಮಾಡುವುದು ಮುದ್ದೆ ತೊಳಿಸುವುದರಲ್ಲಿ ಎತ್ತಿದ ಕೈ ಮನೆಗೆಲಸ ಮಾಡುತ್ತಲೇ ಓದಿ ಪಾಸಾದವಳು ಇತರರಂತೆ ತಾನು ಮುಂದೆ ಓದಬೇಕೆಂಬ ಆಸೆ ಹೊತ್ತವಳು.

ಶಾಂತಿಯ ತಂದೆ-ತಾಯಿ ಸ್ಥಿತಿವಂತರೇನೂ ಅಲ್ಲ. ಹಾಲು ಮಾರಿ ಜೀವನ ಮಾಡುವವರು ರಟ್ಟೆ ಮುರಿಯುವ ಹಾಗೆ ದುಡಿದರೆ ಮಾತ್ರ ಎರಡು ಹೊತ್ತಿನ ಊಟ ಹಾಗಿದ್ದರೂ ಶಾಂತಿಯನ್ನು ಶಾಲೆಗೆ ಕಳಿಸಲಾರದವರೇನೂ ಅಲ್ಲ. ಮನಸ್ಸು ಮಾಡಿದರೆ ಸ್ಕೂಲಿಗೆ ಸೇರಿಸಬಹುದು. ಆದರೆ ಹೆಣ್ಣು ಮಕ್ಕಳಿಗೆ ಯಾಕೆ ವಿದ್ಯೆ ಎನ್ನುವ ಮಾತು ಶಾಂತಿ ಎರಡು ದಿನ ಉಪವಾಸ ಮಾಡಿದಳು ಹಟ ಮಾಡಿದ್ಲು ತನ್ನ ಗೆಳತಿಯರೆಲ್ಲಾ ಶಾಲೆಗೆ ಹೋಗುತ್ತಿದ್ದಾರೆಂದು ಅತ್ತಳು. ಯಾರೂ ಜಗ್ಗಲಿಲ್ಲ. ಸ್ಕೂಲಿನ ಫೀಸು, ಪುಸ್ತಕ ತೆಗೆದು ಕೊಡೋಕೆ ನಮ್ಮ ಕೈಯಲ್ಲಿ ಆಗೊಲ್ಲ. ನೀನು ಎಲ್ಲಾದರೂ ಕೆಲಸ ಹುಡಿಕಿಕೊ ಎಂದು ಒರಟಾಗಿ ಹೇಳಿದಾಗ ಏನು ಮಾಡಬೇಕೆಂದು ತೋಚದ ಆ ಮುಗ್ಧ ಬಾಲೆ ಸುಮ್ಮನಾದಳು.

"ನನಗೆ ಕನ್ನಡ, ವಿಜ್ಞಾನ ಎಂದರೆ ತುಂಬಾ ಇಷ್ಟ, ಕೊಕ್ಕೊ ಆಟದಲ್ಲಿ ನನಗೆ ಎರಡು ಪ್ರೈಸ್ ಬಂದಿದೆ. ಆದ್ರೆ ನಮ್ಮ ಮನೆಯಲ್ಲಿ ಎಷ್ಟು ಕೇಳಿದರು ಅಷ್ಟೆ ಕಳಿಸೋದಿಲ್ಲ" ಎಂದಳು ನಿರಾಶೆಯ ದನಿಯಲ್ಲಿ. "ಓದಿಸೋರ ಮನೆಯಲ್ಲಿ ಮಕ್ಕಳು ಓದಲ್ಲ ಆದರೆ ಓದ್ತಿವಿ ಅನ್ನೋ ನಮಗೆ ಓದಿಸೋರು ಇಲ್ಲ" ಶಾಂತಿ ಮುಖ ಚಿಕ್ಕದು ಮಾಡುತ್ತಾಳೆ.

ಶಾಲೆಗೆ ಸೇರಿ ಪುಸ್ತಕಗಳಿಗೆ ರಟ್ಟು ಹಾಕಿಕೊಂಡು ಇತರ ಗೆಳತಿಯರಂತೆ ನಕ್ಕು ನಲಿಯಬೇಕಾದ ಈ ಹಸುಳೆ ಕೆಲಸಕ್ಕಾಗಿ ಬೇಟೆ ನಡೆಸಿದ್ದಾಳೆ. ಯಾರೋ ಜೂಸ್ ಮಾಡುವ ಕಾರ್ಖಾನೆಯಲ್ಲಿ ಕೆಲಸ ಕೊಡ್ತಾರೆ ಎಂದು ಹೇಳಿದ್ದನ್ನು ಕೇಳಿ ನಾಲ್ಕು ಐದು ಕಿಲೋ ಮೀಟರ್ ದೂರದ ಕಾರ್ಖಾನೆಗೆ ಹೋಗಿ ಕೇಳಿದಾಗ "ನೀನು ಇನ್ನೂ ಚಿಕ್ಕವಳು ತಗೋಳೋಕೆ ಆಗೊಲ್ಲ ಅಥವಾ ಲಂಗಾದಾವಣಿ ಹಾಕಿಕೊಂಡು ಬಾ" ಎಂದರು ಆದರೆ ನಮ್ಮ ಮನೆಯಲ್ಲಿ ಬಟ್ಟೆ ಹೊಲಿಸಿಲ್ಲ ಎಂದು ತನಗಾಗುತ್ತಿರುವ ಅನ್ಯಾಯದ ಅರಿವಿಲ್ಲದೇ ನುಡಿಯುತ್ತಾಳೆ.

ಇದು ಶಾತಿಯೊಬ್ಬಳ ಕತೆಯಲ್ಲ ಪ್ರಾಥಮಿಕ ತರಗತಿ ಮುಗಿದೆ ಮಾಧ್ಯಮಿಕ ಶಾಲೆ ಸೇರಬೇಕಾದ ಮಾಧ್ಯಮಿಕ ಶಾಲೆಯಿಂದ ಹೈಸ್ಕೂಲು ಸೇರುವ ಕಾಲೇಜು ಸೇರಬೇಕಾದ ಘಟ್ಟದಲ್ಲಿರುವ ಹೆಣ್ಣುಮಕ್ಕಳು ಈ ಆತಂಕದಿಂದದ ನರಳುತ್ತಾರೆ, ಆರ್ಥಿಕ ಕಾರಣದೊಂದಿಗೆ ಹೆಣ್ಣು ಮಕ್ಕಳಿಗೇಕೆ ವಿದ್ಯೆ ಅನ್ನುವ ಧೋರಣೆಯಿಂದ ಮಕ್ಕಳನ್ನು ಈ ಹಂತಗಳಲ್ಲಿಯೇ ಬಿಡಿಸಿ ಬಿಡುತ್ತಾರೆ, ಮನೆಗೆಲಸದ ಜವಾಬ್ದಾರಿ ಇದರಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಮನೆಗೆಲಸಕ್ಕಾಗಿಯೇ ಹೆಣ್ಣುಮಕ್ಕಳನ್ನು ಶಾಲೆಗೆ ಕಳಿಸದೆ ಅವರ ಬಾಳಲ್ಲಿ ಕತ್ತಲನ್ನು ತುಂಬುವ ನಿದರ್ಶನಗಳು ಅಪರೂಪವೇನಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಇಂತಹ ಉದಾಹರಣೆಗಳು ವಿಫುಲವಾಗಿ ದೊರೆಯುತ್ತವೆ.

ಅದು ಅಗತ್ಯವಿರುವವರಿಗೆ ತಲುಪುತ್ತಿದೆಯೇ? ಹಾಗೆಯೇ ಉದ್ಯೋಗಸ್ಥ ಮಹಿಳೆಯರು ಮನೆಯ ಒಳಗೂ, ಹೊರಗೂ ದುಡಿಯುತ್ತಿದ್ದಾರೆ(ಹೆಚ್ಚಿನವರಿಗೆ ಮನೆಯವರ ಸಹಕಾರವಿಲ್ಲ). ಇಂತಹವರಿಗೆ ಅಗತ್ಯವಾಗಿ ಬೇಕಾದ ಸೌಕರ್ಯಗಳಾದ ಶಿಶುಕೇಂದ್ರ, ವಸತಿ ನಿಲಯ, ಶೌಚಾಲಯ ವ್ಯವಸ್ಥೆ ಕಲ್ಪಿಸುವುದರತ್ತ ಗಮನ ಹರಿಸಿದ್ದಾರೆಯೇ? ಗಮನ ಹರಿಸಿದ್ದಲ್ಲಿ ಅದರ ಪ್ರಯೋಜನ ಪಡೆಯುತ್ತಿರುವವರು ನಗರವಾಸಿಗಳೇ ವಿನಃ ಗ್ರಾಮಾಂತರ ಪ್ರದೇಶಗಳಲ್ಲಿರುವವರಲ್ಲ. ಹಾಗಾದರೆ ಗ್ರಾಮೀಣ ಪ್ರದೇಶಗಳಲ್ಲಿ ದುಡಿಯುವವರನ್ನು ಕೇಳುವವರು ಯಾರು? ಈ ನಿಟ್ಟನಲ್ಲಿ ಶ್ರಮಿಸಬೇಕಾದವರು ಯುವ ರಾಜಕಾರಣಿಗಳು. ಇವರೂ ಹಳೆಯ ರಾಜಕಾರಣಿಗಳ ಜಾಡನ್ನು ಹಿಡಿಯುವಂತಾದರೆ ಸಾರ್ವಜನಿಕ ಪ್ರಗತಿ ಸಾಧ್ಯವೆ? ಎಂಬುದು ಇಂದು ಹಲವರನ್ನು ಕಾಡುತ್ತಿರುವ ವಿಚಾರ.

0 0 0

## ಸಾಯೋ ಆಟ

ಇಂದು ವರ್ತಮಾನ ಪತ್ರಿಕೆಯಲ್ಲಿ ವಿಮಾನ ದುರಂತದಲ್ಲಿ ಸತ್ತವರ ಶವಗಳನ್ನು ನೋಡಿದೆ. ಆ ಕರಕಲಾದ ಮಾಂಸ ಮುದ್ದೆಗಳು ಅನೇಕ ಕಥೆಗಳನ್ನು ಹೇಳಿದವು. ನೆನಪಿನಾಳಕ್ಕೆ ಇಳಿದಾಗ ಕಣ್ಮುಂದೆ ತೇಲಿ ಬಂದ ಗೆಳತಿ ಕೋಳಿ ಕಸ ಕೆದರುವ ಹಾಗೆ ನನ್ನ ಬಾಲ್ಯದ ನೆನಪನ್ನು ಕೆದಕಿದಳು ; ಕಲಕಿದಳು ನನ್ನ ಹೃದಯ.

ಒಂದು ದಿನ ಅವಳು ಯಾಕೋ ಬೇಸರದಿಂದಿದ್ದಳು ; ನನಗೂನೂ ಬೇಸರವಾಗಿತ್ತು ಮನೆಯಲ್ಲಿ, ಇಬ್ಬರ ಮನಗಳೂ ನೊಂದಿದ್ದವು ಹೀಗಾಗಿ ನಾವಿಬ್ಬರೂ ಕೂಡಿ ಒಂದು ತೀರ್ಮಾನಕ್ಕೆ ಬಂದೆವು, ಈ ಜಗತ್ತಿನಲ್ಲಿ ಹೆಣ್ಣು ಮಕ್ಕಳಿಗೆ ಪುರಸ್ಕಾರವಿಲ್ಲ ; ನಾವು ಇನ್ನು ಇಲ್ಲಿರಬಾರದು ಎಂದು ಬಹಳ ಯೋಚನೆ ಮಾಡಿ ಇಬ್ಬರಲ್ಲಿದ್ದ ಹಣ ಕೂಡಿಸಿದೆವು. ಒಟ್ಟು ಒಂದೂವರೆ ರೂಪಾಯಿ! ಒಂದು ರೂಪಾಯಿಯ ಇಡ್ಲಿ ಐವತ್ತು ಪೈಸೆಯ ಇಲಿ ಪಾಷಾಣ ತಂದು ನಮ್ಮ ಮನೆಯ ಬಚ್ಚಲು ಮನೆಯಲ್ಲಿ ಇಬ್ಬರೂ ಬಾಗಿಲು ಹಾಕಿ; ಒಳಗೆ ಇಲಿ ಪಾಷಾಣ ಇಡ್ಲಿಯ ಜೊತೆಗೆ ಹಚ್ಚಿ ತಿಂದೆವು. ಅವಳು ಹೇಳಿದಳು ನಾಳೆ ಇಷ್ಟು ಹೊತ್ತಿಗೆ ನಾವು ಇಲ್ಲ ಇರುವುದೇ ಇಲ್ಲ, ಇರಲಿ ಇವರೆಲ್ಲಾ ಹಾಯಾಗಿ, ಸುಖವಾಗಿ.

ಅಷ್ಟು ಹೊತ್ತಿಗೆ ನಮ್ಮ ಹುಡುಕುತ್ತಾ ಬಂದ ಅಮ್ಮ ಬೈದಳು; ಇಲ್ಲೇನು ಕೆಲಸ ನಿಮಗೆ ಒಳಗೆ ನಡೆಯಿರಿ ಎಂದು. ಅವಳು ತನ್ನ ಮನೆಗೆ ಹೋದಳು, ನಾನು ನಮ್ಮ ಮನೆಯಲ್ಲಿ ಸಾವು ನಿರೀಕ್ಷಿಸುತ್ತಾ ಕುಳಿತೆವು. ಮರುದಿನವಾದರೂ ಆ ಸಾವು ಬರಲೇ ಇಲ್ಲಾ ................... ನಾನು ಸತ್ತಿರಬಹುದೆಂದು ಅವಳು ಮತ್ತೆ ಬಂದಳು ನಮ್ಮ ಮನೆಗೆ "ಅರೇ ........... ನೀನೂ ಸತ್ತಿಲ್ಲವಾ? ನಾನೂ ಸತ್ತಿಲ್ಲ!!"

ಆ ಇಲಿ ಪಾಷಾಣ ಕೊಟ್ಟ ಅಂಗಡಿಯವ ನಮಗೆ ಮೋಸ ಮಾಡಿದ ಎಂದು ಬೈದುಕೊಳ್ಳುತ್ತಾ ಸುಮ್ಮನಾದೆವು. ಅಂದಿನ ಆ ಹುಡುಗಾಟಕೆಗೆ ಇಂದು ನಗುತ್ತೇನೆ...................

ಆದರೆ ಆ ಗೆಳತಿ ಮೊನ್ನೆ ಮೊನ್ನೆ ನಿಜವಾಗಿಯೂ ಸತ್ತಿದ್ದಾಳೆ; ನನ್ನೊಬ್ಬಳನ್ನೇ ಬಿಟ್ಟು, ಮದುವೆಯಾಗಿ ಗಂಡನ ಮನೆಗೆ ಹೋದ ಗೆಳತಿ ಮಗುವನ್ನೆತ್ತಿಕೊಂಡು ಬಂದಿದ್ದಳೊಮ್ಮೆ, ಮತ್ತೊಮ್ಮೆ ಅವಳು ಬರಲೇ ಇಲ್ಲ. ಮಗುವನ್ನು ತೊಡೆಯಲ್ಲಿ ಸಿಕ್ಕಿಸಿ ಸೀಮೆ ಎಣ್ಣೆ ಸುರಿದು ಸುಟ್ಟುಕೊಂಡು ದೇವರ ಮುಂದೆ ನಮಸ್ಕರಿಸುವ ಭಂಗಿಯಲ್ಲಿ ಮಾಂಸದ ಮುದ್ದೆಯಾದ ಅವಳ ಸಾವಿಗೆ ಕಾರಣ ತಿಳಿಯಲಿಲ್ಲ. ನನಗೆ; ನಮ್ಮಂಥ ಸೂಕ್ಷ್ಮ ಹೃದಯಿಗಳಿಗೆ ಇದೊಂದೇ ಮಾರ್ಗವೇ?!

ಮಂಜುಳಾ ಅಮರನಾಥ

# ಬಾನುಲಿ ನಾಟಕ ರಚನಾ ಶಿಬಿರ

ಗೀತಾ

ಆಕಾಶವಾಣಿಯ ಸಹಕಾರದೊಂದಿಗೆ ೨೬.೫.೯೦ ರಂದು ಕರ್ನಾಟಕ ಲೇಖಕಿಯರ ಸಂಘವು ಮಹಿಳೆಯರಿಗೆ "ಬಾನುಲಿ ನಾಟಕ ರಚನಾ ಶಿಬಿರ" ವನ್ನೇರ್ಪಡಿಸಿತ್ತು. ಬಾನುಲಿಯ ಪ್ರಾಂಗಣದಲ್ಲೇ ನಡೆದ ಈ ಶಿಬಿರವನ್ನು ಉದ್ಘಾಟಿಸುತ್ತಾ, ಕ. ಲೇ. ಸಂಘದ ಅಧ್ಯಕ್ಷೆ ಶ್ರೀಮತಿ ಹೇಮಲತಾ ಮಹಿಷಿ, ಸ್ತ್ರೀಯರು ಪುರುಷ ವಿಮರ್ಶಕರ ಟೀಕೆಗಳನ್ನು ಸವಾಲೆಂದು ಪರಿಗಣಿಸದೆ ನಾಟಕ ರಚನೆಯೆಂದರೆ ಹಿಂಜರಿಯಲು ಕಾರಣ ಹೊರ ಪ್ರಪಂಚದ ಅನುಭವದ ಕೊರತೆಯಾದರ, ಬಾನುಲಿ ನಾಟಕಗಳ ತಂತ್ರದ ಅಜ್ಞಾನ ರೇಡಿಯೋ ನಾಟಕಗಳಿಂದ ದೂವಿರಲು ಕಾರಣ ಎಂದರು. ಈ ಬಗ್ಗೆ ಲೇಖಕಿಯರಿಗೆ ಅರಿವನ್ನುಂಟುಮಾಡುವುದಲ್ಲದೆ, ರಚನಾಕಲೆಯನ್ನೂ ಉತ್ತಮಗೊಳಿಸುವುದು ಶಿಬಿರದ ಗುರಿಯೆಂದರು.

ಬಾನುಲಿ ನಾಟಕಗಳಲ್ಲೂ ಅಭಿವ್ಯಕ್ತಿ ಮಾಧ್ಯಮವಿದೆಯೆನ್ನುತ್ತಾ ಭಾಷಣ ಆರಂಭಿಸಿದ ನಿಲಯದ ನಿರ್ದೇಶಕಿ ಶ್ರೀಮತಿ ಜ್ಯೋತ್ಸ್ನಾ ಕಾಮತ್ ರೇಡಿಯೋ ನಾಟಕಗಳು ಸೃಜನಶೀಲವೂ ಹೌದೆಂದರು. ಬಾನುಲಿ ಬರವಣಿಗೆಯ ಪರಿಚಯ ಎಷ್ಟೋ ಜನ ಪುರುಷ ಸಾಹಿತಿಗಳಿಗೂ ಇಲ್ಲವೆನ್ನುತ್ತಾ, ಶಿಬಿರಾರ್ಥಿಗಳಿಗೆ ಉಪಯುಕ್ತ ಮಾಹಿತಿಗಳನ್ನು ನೀಡಿದರು. ಸಂಗೀತದ ನಂತರ ಅತ್ಯಂತ ಜನಪ್ರಿಯವೆನಿಸಿರುವ ಈ ನಾಟಕಗಳೆಡೆಗೆ ಲೇಖಕಿಯರ ನಿರಾಸಕ್ತಿ ವಿಷಾದನೀಯವೆಂದು ನುಡಿದರು. ರಂಗನಾಟಕಗಳಂತೆ ಉಡುಗೆ, ರಂಗಸಜ್ಜಿಕೆಗಳನ್ನಪೇಕ್ಷಿಸದ ಈ ನಾಟಕಗಳಿಗೆ ಶಬ್ದಗಳೇ ಜೀವಾಳ, ಸಶಕ್ತ ಸಂಭಾಷಣೆ ಪರಿಣಾಮಕಾರಿ ಧ್ವನಿಯಲ್ಲಿ, ನಿರ್ದಿಷ್ಟ ಸಂದೇಶ, ಭಾವಗಳಿಂದ ಮೂಡಿಬರಬೇಕೆಂದರು. ಎಂಥದೇ ವಸ್ತುವಾದರೂ, ಕಡಿಮೆ ಅವಧಿ ಹೊಂದಿದ್ದು, ಎಂತಹ ಕಥಾವಸ್ತುವಾದರೂ ಚುರುಕಾದ ಚಿಕ್ಕ ಸಂಭಾಷಣೆಗಳು, ಕಡಿಮೆ ಪಾತ್ರಗಳು ಅತ್ಯವಶ್ಯವೆಂದರು. ಆಕಾಶವಾಣಿಗೆ ಮಡಿವಂತಿಕೆಯಿಲ್ಲವಾದರೂ, ಬಾನುಲಿ ಬಹುಜನರನ್ನು ತಲುಪುತ್ತದೆಯಾದ್ದರಿಂದ ಕೆಲ ಅಂಶಗಳನ್ನು ಕೈಬಿಡಬೇಕಾಗುತ್ತದೆ. ಹಿಂಸೆಗೆ ಪ್ರಚೋದಿಸುವ, ವಿವಾಹ ವಿಚ್ಛೇದನಗಳಿಗೆ ಉತ್ತೇಜಿಸುವಂಥ ಅಂಶಗಳಿಗೆ ಪ್ರಾಶಸ್ತ್ಯ ಕಡಿಮೆ ಎಂದು ತಿಳಿಸಿದರು. ವ್ಯಕ್ತಿದೂಷಣೆ, ವರ್ಗ, ಜಾತಿ ಹೆಸರಿನಿಂದ ನಿಂದಿಸುವಂಥ ತಪ್ಪುಗಳನ್ನು ಲೇಖಕಿಯರು ಮಾಡಬಾರದೆಂದು ಕಿವಿಮಾತು ಹೇಳುತ್ತಾ ಪ್ರಚಲಿತ ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಸ್ತ್ರೀ ರಚನೆಗಳು ಹೆಚ್ಚಿನ ಸಂಖ್ಯೆಯಲ್ಲಿ ಸ್ಪರ್ಧೆಗೆ ಬರಲೆಂಬ ಆಶಯದೊಂದಿಗೆ ಶ್ರೀಮತಿ ಕಾಮತ್ ತಮ್ಮ ಮಾತು ಮುಗಿಸಿದರು.

ಬಾನುಲಿ ನಾಟಕಗಳ ನಿರ್ದೇಶನದಲ್ಲಿ ಹೆಸರಾದ ಶ್ರೀಮತಿ ಯಮುನಾಮೂರ್ತಿ ನಾಟಕಗಳ ಉದಾಹರಣೆಗಳೊಂದಿಗೆ ಪರಿಣಾಮಕಾರಿಯಾದ ಭಾಷಣ ನೀಡಿದರು. ಪಂಡಿತ, ಪಾಮರರೆನ್ನದ ಅಂತಸ್ತು, ವರ್ಗ ಭೇದವಿಲ್ಲದೆ ಎಲ್ಲರನ್ನೂ ತನ್ನತ್ತ ಸೆಳೆದುಕೊಳ್ಳುವ ಶಕ್ತಿ ಬಾನುಲಿ ನಾಟಕಗಳಿಗಿದೆ ಆದರೂ ಹೆಚ್ಚು ಪ್ರಚಾರವಿಲ್ಲದಿರುವುದರಿಂದ ಈ ಕ್ಷೇತ್ರದಲ್ಲಿ ಮಹಿಳೆಯರ ಆಸಕ್ತಿ ಕಡಿಮೆ ಎಂದರು. ರಂಗ ನಾಟಕಗಳಿಗೂ ಬಾನುಲಿ ನಾಟಕಗಳಿಗೂ ಇರುವ ವ್ಯತ್ಯಾಸ, ಬಾನುಲಿ ನಾಟಕಗಳ ಪ್ರಸಾರದಲ್ಲಿರುವ ಅನುಕೂಲತೆಯನ್ನು ಮನದಟ್ಟಾಗುವಂತೆ ತಿಳಿಸಿದರು.

ಬಾನುಲಿ ರೂಪಾಂತರಗಳಲ್ಲಿ ಎತ್ತಿದ ಕೈ ಎನಿಸಿದ ಶ್ರೀಮತಿ ಎಚ್. ಎಸ್. ಪಾರ್ವತಿಯವರು ಬಾನುಲಿ ರೂಪಾಂತರ ಬಾನುಲಿ ನಾಟಕಕ್ಕಿಂತಲೂ ಪ್ರಥಮ ಜನ್ಮ ಪಡೆದಿದ್ದು ಎಂದರು. ರೂಪಾಂತರದ ಮೂಲ ಯಾವುದಾದರೂ ನಾಟಕೀಯ ಅಂಶಕ್ಕೆ ಹೆಚ್ಚು ಒತ್ತುಕೊಡಬೇಕಾದುದರಿಂದ ಬದಲಾವಣೆಗಳಿರುತ್ತವೆ. ಪ್ರತಿಮೆ ಪ್ರತೀಕಗಳಿಗೆ ಅಗತ್ಯವಿದ್ದಷ್ಟು ಒತ್ತುಕೊಡಬೇಕೆಂದರು. ಅನುವಾದ ಮಾಡುವಲ್ಲಿ ಎದರಾಗುವ ಸಮಸ್ಯೆಗಳನ್ನು ವಿಶ್ಲೇಷಿಸಿದರು.

"ಗುಳಿಗೆ", "ನಳಿನಿಯ ತಂದೆ" ಎಂಬ ೨ ನಾಟಕಗಳನ್ನು ಆಲಿಸಿದ ಶಿಬಿರಾರ್ಥಿಗಳಲ್ಲಿ ಬಾನುಲಿ ನಾಟಕಗಳ ಬಗ್ಗೆ ಸ್ಪಷ್ಟ ಕಲ್ಪನೆ ಮೂಡಲು ಸಹಾಯಕವಾಯ್ತು. ಇಂತಹ ಶಿಬಿರಗಳು ಅಗತ್ಯ ಎಂಬ ಏಕಾಭಿಪ್ರಾಯದೊಂದಿಗೆ ಶಿಬಿರ ಮುಕ್ತಾಯವಾಯಿತು.

# ಗಾಂಧಾರೀ ಉವಾಚ

ಸೋದರೀ
ನೀನು ನನ್ನನ್ನೇ
ಮಾಡಿಕೊಳ್ಳದಿರು ಮಾದರಿ,
ಸುಳ್ಳು ಕಣೇ ಈ ಜನರ ವಿಚಾರ
ಗೋಚರಿಸಲಿಲ್ಲ ಇವರಿಗೆ
ನನ್ನ ಮನದ ವಿಕಾರ,



ಆ ದಿನ
ನಾನು ಕಣ್ಣಿದ್ದೂ ಕುರುಡಾದ ದಿನ
ಜನರೆಲ್ಲಾ 'ಭಲೆ ಭಲೆ' ಎಂದು
ತಟ್ಟಿದರು ಬೆನ್ನ,
ಕೊಟ್ಟರು 'ಸತಿ ಶಿರೋಮಣಿ'
ಎಂಬ ಬಿರುದನ್ನ,
ಅರಿಯಲಿಲ್ಲವರು
ಎದೆಯಾಳದ ಅಳಲನ್ನ

ಹದಿಹರೆಯದ ಕಂಗಳಲ್ಲಿ
ನೂರು ಹೊಂಗನಸುಗಳು ತುಂಬಿದ್ದವು,
ಅಂಗ ಅಂಗಗಳೂ ಸಂಗಡಿಗನ ಬಯಸಿದ್ದವು,
'ಎಷ್ಟು ಚೆಂದವಿದ್ದೀ' ಎಂದು ಚುಂಬಿಸುವ
ಮಿಂಚು ಕಂಗಳ ಸೊಗಸುಗಾರನ
ಮನಸು ಕನಸಿತ್ತು.

ಬಂಗಾರದ ಜಿಂಕೆಗೆ ಬಡಿದ ಸಿಡಿಲು
ಭೀಷ್ಮನ ಸವಾಲು,
ಅನಿವಾರ್ಯಗಿ ನಾನಾಗಬೇಕಾಯ್ತು
ಧೃತರಾಷ್ಟ್ರನ ಅರ್ಧಪಾಲು.

ನನ್ನನ್ನೆ ಕಾಣಲಾಗದ ಸಖ
ನನಗುಣಿಸಿಯಾನೆ ಸುಖ?
ನೋಡಬೇಕಿತ್ತೇ ಆ ಕಣ್ಣಿಲ್ಲದ ಮುಖ?
ಕನಸುಗಳಿಗೆ ಆಸೆಗಳಿಗೆ ಕುರುಡು ಬಡಿದ ಮೇಲೆ

ಬಾಹ್ಯ ಕಣ್ಣುಗಳಿದ್ದೇನು ಬೆಲೆ?
ಕನಸುಗಳ ಕದವ ಮುಚ್ಚಿಕೊಂಡೆ
ಬಿಚ್ಚಲಾಗದ ಪಟ್ಟಿ ಕಟ್ಟಿಕೊಂಡೆ.

ಸೋದರೀ, ನೀನು ನನ್ನನ್ನೇ
ಮಾಡಿಕೊಳ್ಳದಿರು ಮಾದರಿ.
ಹುಡುಕಿಕೋ ನೀನೇ ನಿನ್ನ ದಾರಿ.
ನಡುವೆ ತಡೆಯುವವರ ತಳ್ಳಿ
ಹಬ್ಬಲಿ ನಿನ್ನ ಬಾಳ ಬಯಕೆಯ ಬಳ್ಳಿ
ಪ್ರೀತಿಯ ಚಪ್ಪರವಿರುವಲ್ಲಿ
ಆಸೆಯ ನೀರು ಸುರಿವಲ್ಲಿ.

ಇಂದಿರಾ ಕನಕೇಶ್

# ಅಸಹಾಯಕ ವಿದ್ಯಾರ್ಥಿನಿ

ಎಳೆಯ ವಯಸ್ಸಿನ ಬಾಲೆ ಶಾಂತಿ ಚೂಟಿ ಹುಡುಗಿ. ಹತಾಷೆಯಿಂದ ಕೈ ಚೆಲ್ಲಿ ಮನೆಗೆಲಸದ ಹೊರಗೆ ಹೆಗಲೊಡ್ಡಿದ್ದಾಳೆ. ಏಳನೇ ತರಗತಿಯಲ್ಲಿ ಉತ್ತಮ ಅಂಕಗಳನ್ನು ಗಳಿಸಿ ಉತ್ತೀರ್ಣಳಾದ ಶಾಂತಿ ಇತರ ಗೆಳತಿಯರಂತೆ ಮುಂದೆ ಓದುವ ಸಂಭ್ರಮ ದಿಂದ ವಂಚಿತಳಾಗಿ ನಿರಾಶೆಯ ನಿಟ್ಟುಸಿರು ಬಿಡುತ್ತಿದ್ದಾಳೆ.

ಶಾಂತಿ ಪಾದರಸದಂತ ಹುಡುಗಿ ಹತ್ತು ಹೊಡೆಯುವುದರೊಳಗೆ ಮನೆಯ ಎಲ್ಲಾ ಕೆಲಸಗಳನ್ನು ಮುಗಿಸಿ ಬಿಡುತ್ತಾಳೆ. ಪಾತ್ರೆ ತೊಳೆಯುವುದು, ಮನೆ ಶುಚಿಗೊಳಿಸುವುದು, ಅನ್ನ ಸಾರು ಮಾಡುವುದು ಮುದ್ದೆ ತೊಳಿಸುವುದರಲ್ಲಿ ಎತ್ತಿದ ಕೈ. ಮನೆಗೆಲಸ ಮಾಡುತ್ತಲೇ ಓದಿ ಪಾಸಾದವಳು ಇತರರಂತೆ ತಾನು ಮುಂದೆ ಓದಬೇಕೆಂಬ ಆಸೆ ಹೊತ್ತವಳು.

ಶಾಂತಿಯ ತಂದೆ-ತಾಯಿ ಸ್ಥಿತಿವಂತರೇನೂ ಅಲ್ಲ. ಹಾಲು ಮಾರಿ ಜೀವನ ಮಾಡುವವರು ರಟ್ಟೆ ಮುರಿಯುವ ಹಾಗೆ ದುಡಿದರೆ ಮಾತ್ರ ಎರಡು ಹೊತ್ತಿನ ಊಟ ಹಾಗಿದ್ದರೂ ಶಾಂತಿಯನ್ನು ಶಾಲೆಗೆ ಕಳಿಸಲಾರದವರೇನೂ ಅಲ್ಲ. ಮನಸ್ಸು ಮಾಡಿದರೆ ಸ್ಕೂಲಿಗೆ ಸೇರಿಸಬಹುದು. ಆದರೆ ಹೆಣ್ಣು ಮಕ್ಕಳಿಗೆ ಯಾಕೆ ವಿದ್ಯೆ ಎನ್ನುವ ಮಾತು ಶಾಂತಿ ಎರಡು ದಿನ ಉಪವಾಸ ಮಾಡಿದಳು ಹಟ ಮಾಡಿದ್ಲು ತನ್ನ ಗೆಳತಿಯರೆಲ್ಲಾ ಶಾಲೆಗೆ ಹೋಗುತ್ತಿದ್ದಾರೆಂದು ಅತ್ತಳು. ಯಾರೂ ಜಗ್ಗಲಿಲ್ಲ. ಸ್ಕೂಲಿನ ಫೀಸು, ಪುಸ್ತಕ ತೆಗೆದು ಕೊಡೋಕೆ ನಮ್ಮ ಕೈಯಲ್ಲಿ ಆಗೊಲ್ಲ. ನೀನು ಎಲ್ಲಾದರೂ ಕೆಲಸ ಹುಡಿಕಿಕೊ ಎಂದು ಒರಟಾಗಿ ಹೇಳಿದಾಗ ಏನು ಮಾಡಬೇಕೆಂದು ತೋಚದ ಆ ಮುಗ್ಧ ಬಾಲೆ ಸುಮ್ಮನಾದಳು.

"ನನಗೆ ಕನ್ನಡ, ವಿಜ್ಞಾನ ಎಂದರೆ ತುಂಬಾ ಇಷ್ಟ. ಕೊಕ್ಕೊ ಆಟದಲ್ಲಿ ನನಗೆ ಎರಡು ಪ್ರೈಸ್ ಬಂದಿದೆ. ಆದ್ರೆ ನಮ್ಮ ಮನೆಯಲ್ಲಿ ಎಷ್ಟು ಕೇಳಿದರು ಆಷ್ಟೆ ಕಳಿಸೋದಿಲ್ಲ" ಎಂದಳು ನಿರಾಶೆಯ ದನಿಯಲ್ಲಿ. "ಓದಿಸೋರ ಮನೆಯಲ್ಲಿ ಮಕ್ಕಳು ಓದಲ್ಲ ಆದರೆ ಓದ್ತಿವಿ ಅನ್ನೋ ನಮಗೆ ಓದಿಸೋರು ಇಲ್ಲ" ಶಾಂತಿ ಮುಖ ಚಿಕ್ಕದು ಮಾಡುತ್ತಾಳೆ.

ಶಾಲೆಗೆ ಸೇರಿ ಪುಸ್ತಕಗಳಿಗೆ ರಟ್ಟು ಹಾಕಿಕೊಂಡು ಇತರ ಗೆಳತಿಯರಂತೆ ನಕ್ಕು ನಲಿಯಬೇಕಾದ ಈ ಹಸುಳೆ ಕೆಲಸಕ್ಕಾಗಿ ಬೇಟೆ ನಡೆಸಿದ್ದಾಳೆ. ಯಾರೋ ಜೂಸ್ ಮಾಡುವ ಕಾರ್ಖಾನೆಯಲ್ಲಿ ಕೆಲಸ ಕೊಡ್ತಾರೆ ಎಂದು ಹೇಳಿದ್ದನ್ನು ಕೇಳಿ ನಾಲ್ಕು ಐದು ಕಿಲೋ ಮೀಟರ್ ದೂರದ ಕಾರ್ಖಾನೆಗೆ ಹೋಗಿ ಕೇಳಿದಾಗ "ನೀನು ಇನ್ನೂ ಚಿಕ್ಕವಳು ತಗೋಳೋಕೆ ಆಗೊಲ್ಲ ಅಥವಾ ಲಂಗಾದಾವಣಿ ಹಾಕಿಕೊಂಡು ಬಾ" ಎಂದರು ಆದರೆ ನಮ್ಮ ಮನೆಯಲ್ಲಿ ಬಟ್ಟೆ ಹೊಲಿಸಿಲ್ಲ ಎಂದು ತನಗಾಗುತ್ತಿರುವ ಅನ್ಯಾಯದ ಅರಿವಿಲ್ಲದೇ ನುಡಿಯುತ್ತಾಳೆ.

ಇದು ಶಾತಿಯೊಬ್ಬಳ ಕತೆಯಲ್ಲ ಪ್ರಾಥಮಿಕ ತರಗತಿ ಮುಗಿದ ಮಾಧ್ಯಮಿಕ ಶಾಲೆ ಸೇರಬೇಕಾದ ಮಾಧ್ಯಮಿಕ ಶಾಲೆಯಿಂದ ಹೈಸ್ಕೂಲು ಸೇರುವ ಕಾಲೇಜು ಸೇರಬೇಕಾದ ಘಟ್ಟದಲ್ಲಿರುವ ಹೆಣ್ಣು ಮಕ್ಕಳು ಈ ಆತಂಕದಿಂದದ ನರಳುತ್ತಾರೆ. ಆರ್ಥಿಕ ಕಾರಣದೊಂದಿಗೆ ಹೆಣ್ಣು ಮಕ್ಕಳಿಗೇಕೆ ವಿದ್ಯೆ ಅನ್ನುವ ಧೋರಣೆಯಿಂದ ಮಕ್ಕಳನ್ನು ಈ ಹಂತಗಳಲ್ಲಿಯೇ ಬಿಡಿಸಿ ಬಿಡುತ್ತಾರೆ. ಮನೆಗೆಲಸದ ಜವಾಬ್ದಾರಿ ಇದರಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಮನೆಗೆಲಸಕ್ಕಾಗಿಯೇ ಹೆಣ್ಣುಮಕ್ಕಳನ್ನು ಶಾಲೆಗೆ ಕಳಿಸದೆ ಅವರ ಬಾಳಲ್ಲಿ ಕತ್ತಲನ್ನು ತುಂಬುವ ನಿದರ್ಶನಗಳು ಅಪರೂಪವೇನಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಇಂತಹ ಉದಾಹರಣೆಗಳು ವಿಪುಲವಾಗಿ ದೊರೆಯುತ್ತವೆ.

ಸ್ತ್ರೀ ಸಂಚಯ.....

# ಸೀತೆ-ರಾಮ-ರಾವಣ

ಲೇ; ಹೆಚ್. ವಿ. ಸಾವಿತ್ರಮ್ಮ

ಪ್ರ.: ಕಾವ್ಯಾಲಯ ಪ್ರಕಾಶನ

ಕೌಸಲ್ಯೆ ದೇವಿಯ ಅಡಿಯ ಹೂವನ್ನು ಮುಡಿಯಲ್ಲಿಟ್ಟು ಎದ್ದಳು. ಗೌರಿ ಆಕೆಯ ಸುಂದರ ನಿಲುವನ್ನು ಮೆಚ್ಚಿಕೆಯಿಂದ ನೋಡಿದಳು. ಇದ್ದಕ್ಕಿದಂತೆ ಕೌಸಲ್ಯೆ "ಗೌರಿ, ನೀನು ಹೊಸರಾಣಿಯನ್ನು ನೋಡಿದೆಯಾ?" ಎಂದು ಕೇಳಿದಳು.

"ನೋಡಿದೆ ತಾಯಿ, ಮನೆಗೆ ಬಂದಾಗಲೇ ನೋಡಿದೆ"

"ಹೇಗಿದ್ದಾಳೆ?" ಕೌಸಲ್ಯ ತಡವರಿಸುತ್ತಾ ಕೇಳಿದಳು.

"ಚೆನ್ನಾಗಿದ್ದಾರಮ್ಮಾ, ತುಂಬಾ ಸಾತ್ವಿಕ ಪ್ರಕೃತಿಯೆಂದು ಕಾಣುತ್ತೆ. ಆಕೆಯ ಸೇವಕಿಯರೆಲ್ಲಾ ಹೇಳುತ್ತಾರೆ– ಒಂದು ದಿನವಾದರು ಗಟ್ಟಿಯಾಗಿ ಗದರಿಸಿಲ್ಲವಂತೆ." ತುಂಬಾ ನಯ,ವಿನಯ,"

"ಆಕೆಯ ಮದುವೆಯಾಗಿ ಒಂದು ತಿಂಗಳಾಯಿತು, ನಾನಿನ್ನೂ ನೋಡಿಯೇ ಇಲ್ಲ."

"ಆಕೆಗೂ ನಿಮ್ಮನ್ನು ನೋಡಬೇಕೆಂದು ಆಸೆಯಿದೆಯಂತೆ!"

"ಮತ್ತೆ ಏಕೆ ಬರಲಿಲ್ಲ?"

"ಸಂಕೋಚವಿರಬೇಕು, ನೀವೇ ಒಂದು ಮಾತು ಹೇಳಿ ಕಳಿಸಿದರೆ......"

"ಸಂಕೋಚವೇಕೆ?" ನಿಟ್ಟುಸಿರುಬಿಟ್ಟು "ಆಕೆಯದೇನು ತಪ್ಪಿದೆ? ನೋಡು, ಗೌರೀ ನಿನಗೆ ತಿಳಿಯದಿರುವುದೇನೂ ಇಲ್ಲ. ಅಭಿಮಾನ ಬಿಟ್ಟು ಮಹಾರಾಜರಿಗೆ ಹೇಳಿ ಕಳಿಸಿದೆ, ಅವರು ಈಕಡೆ ಕೂಡ ಬರಲಿಲ್ಲ. ಇನ್ನು ಆ ಹುಡುಗಿಗೂ ನಾನೇ ಹೇಳಿ ಕಳಿಸಬೇಕೆ? ನನ್ನ ತಪ್ಪಿದ್ದರೆ, ಗೌರಿ, ನಾನೇ ಮಹಾರಾಜರ ಕಾಲ ಮೇಲೆ ಬಿದ್ದು ಕ್ಷಮಾಪಣೆ ಕೇಳಿಕೊಳ್ಳುತ್ತಿದ್ದೆ. ಅವರು ಗಂಡಸರು ಏನು ಬೇಕಾದರೂ ಮಾಡಬಹುದು. ಒಂದಲ್ಲ, ಹತ್ತು ಮದುವೆಗಳನ್ನು ಬೇಕಾದರೂ ಮಾಡಿಕೊಳ್ಳಬಹುದು. ನಾನೇನು ಮಾಡಲು ಸಾಧ್ಯ, ಗೌರಿ? ಮಾಡಿಕೊಳ್ಳಲಿ, ಮಹರಾಯನಾಗಿ ಮಾಡಿಕೊಳ್ಳಲಿ. ಆದರೆ, ನನ್ನೊಡನೆ ಒಂದು ಮಾತು, ಒಂದೇ ಮಾತು ಹೇಳ ಕೂಡದಾಗಿತ್ತೆ? ಇಂತಹ ಹುಡುಗಿ ನನ್ನ ದೃಷ್ಟಿಯಲ್ಲಿದ್ದಾಳೆ. ನಿನಗೆ ಒಪ್ಪಿಗೆಯೆ? ಎಂದು ಒಂದು ಮಾತು ಕೇಳಬಾರದಾಗಿತ್ತೆ? ನನ್ನ ಮನಸ್ಸು ಒಪ್ಪುತ್ತಿತ್ತೋ ಇಲ್ಲವೋ! ಅನಿವಾರ್ಯವೆಂದು ತಿಳಿದ ಮೇಲೆ ಮನಸ್ಸಿನಲ್ಲಿಲ್ಲದ ಒಪ್ಪಿಗೆಯನ್ನು ಕೊಡುತ್ತಿದ್ದೆನೇನೋ, ಬಿಡು, ಈಗೇಕೆ ಆ ಮಾತು? ಮಹಾರಾಜರಿಗೇ ನನ್ನಲ್ಲಿ ವಿಶ್ವಾಸ ಗೌರವಗಳಿಲ್ಲದ ಮೇಲೆ ನಿನ್ನೆ ಮೊನ್ನೆ ಬಂದ ಆ ಹುಡುಗಿಗೆ ಹೇಗಿರುತ್ತೆ ಹೇಳು"

"ತಾವು ಹೀಗೆ ನೊಂದುಕೊಂಡು ಕಣ್ಣೀರಿಡಬಾರದು. ಈ ಮನೆಗೆ ಒಳ್ಳೆಯದಲ್ಲ."

"ಈ ಮನೆಯಲ್ಲಿ ನನಗೇನಿದೆ ಗೌರಿ? ಗಂಡನ ಪ್ರೇಮವಿಲ್ಲ; ಮಕ್ಕಳ ಸೌಭಾಗ್ಯವಿಲ್ಲ. ಈ ಮನೆ ದಹಿಸಿಹೋದರೂ ನನಗಾಗಬೇಕಾದುದೇನೂ ಇಲ್ಲ."

"ಬೇಡಿ, ತಾಯಿ ಬೇಡ, ಹಾಗೆನ್ನಬೇಡಿ. ಈಮನೆ ನಿಮ್ಮದು, ನಿಮ್ಮ ಒಳ್ಳೆಯ ಮಾತಿನಿಂದ ಚಿರಕಾಲ ಊರ್ಜಿತವಾಗಬೇಕಾದದ್ದು. ನಿಮ್ಮ ಹಿರಿತನವನ್ನು ನೆನಪಿನಲ್ಲಿಟ್ಟುಕೊಳ್ಳಿ, ಅಷ್ಟು ಸುಲಭವಾಗಿ ಬಿಟ್ಟುಕೊಡಬೇಡಿ."

"ಈಗ ನನಗೆ ಉಪದೇಶ ಮಾಡುತ್ತೀಯಲ್ಲಾ! ನಿನ್ನ ಗಂಡನ್ನ ಬಿಟ್ಟು ಬರುವಾಗ ನಿನ್ನ ಹಿರಿತನವೆಲ್ಲಿ ಹೋಗಿತ್ತು? ಬೇರೆಯವರಿಗೆ ಉಪದೇಶ ಮಾಡುವುದು ಸುಲಭ" ಕೌಸಲ್ಯೆ ನಕ್ಕಳು.

"ಅಮ್ಮಾ, ಎಲ್ಲಿಂದೆಲ್ಲಿಗೆ? ನಾನೆಲ್ಲಿ, ನೀವೆಲ್ಲಿ? ನನ್ನ ಸಂಸಾರ ನಿಮ್ಮ ಸಂಸಾರದೊಡನೆ ಹೋಲಿಸುತ್ತೀರಲ್ಲಾ."

"ಗೌರೀ ನೀನೂ ಹೆಣ್ಣು, ನಾನೂ ಹೆಣ್ಣು. ಅರಮನೆಯಾದರೇನು ಬಡ ಗುಡಿಸಲಾದರೇನು? ಪತಿಪ್ರೇಮದಿಂದ ವಂಚಿತೆಯಾದ ಹೆಂಗಸಿಗೆ ಆ ಮನೆಯೇ ನರಕ," ಕೌಸಲ್ಯೆ ಕಣ್ಣೊರೆಸಿಕೊಂಡಳು. "ಯಾರು ನೋಡು, ಬಾಗಿಲು ತಟ್ಟಿದ ಸದ್ದಾಯಿತು."

ಗೌರಿ ಬಾಗಿಲು ತೆಗೆದು ನೋಡಿ ಉತ್ಸಾಹದಿಂದ "ಅಮ್ಮಾ ಸುಮಿತ್ರಾ ದೇವಿ ಬಂದಿದ್ದಾರೆ." ಎಂದಳು.

ಕೌಸಲ್ಯೆ "ಕರೆದುಕೊಂಡು ಬಾ."

ಸುಮಿತ್ರೆ ನಿಧಾನವಾಗಿ ಹೆದರಿದಂತೆ ಒಳಕ್ಕೆ ಬಂದು "ಅಕ್ಕಾ, ನನ್ನನ್ನು ಕ್ಷಮಿಸಿ" ಎಂದು ಕೌಸಲ್ಯೆಯ ಕಾಲ ಮೇಲೆ ಬಿದ್ದಳು.

ಕಣ್ಣಲ್ಲಿ ನೀರುದುರುತ್ತಿರಲು ಕೌಸಲ್ಯೆ ಆಕೆಯನ್ನೆತ್ತಿ ನಿಲ್ಲಿಸಿ "ಕ್ಷಮೆ ಬೇಡಲು ನೀನು ಮಾಡಿದ ಅಪರಾಧವಾದರೂ ಏನು ತಂಗೀ? ಅಥವಾ ನಿಜವಾಗಿಯೂ ಅಪರಾಧ ಮಾಡಿದ್ದೀ. ಮನೆಗೆ ಬಂದು ತಿಂಗಳಾದರೂ ಈ ಅಕ್ಕನನ್ನು ನೋಡಲು ಬಿಡುವಾಗಲಿಲ್ಲವೇ?"

ಸುಮಿತ್ರೆ ಕೌಸಲ್ಯೆಯ ಕಾಲಬಳಿ ಕುಳಿತು "ನಿಜ ಅಕ್ಕ, ನನ್ನದು ದೊಡ್ಡ ತಪ್ಪು. ಬಂದ ದಿನವೇ ನಿಮ್ಮ ಆಶೀರ್ವಾದ ತೆಗೆದುಕೊಳ್ಳಬೇಕಾಗಿತ್ತು. ಆದರೆ ನೀವೇನೆನ್ನುವಿರೋ, ನಿಮ್ಮ ಮನಸ್ಸಿಗೆ ಎಷ್ಟು ನೋವುಂಟಾಗಿದೆಯೋ ಎಂದು ಹೆದರಿದೆ. ನೀವೇ ಹೇಳಿಕಳುಹಿಸಬಹುದೆಂದು ಕಾದು ನೋಡಿದೆ."

# ನೆಲೆ ಕಂಡ ಬದುಕು

ಸರಸ್ವತಿ ಡು.

ಒಮ್ಮೆ ನನ್ನ ದೊಡ್ಡಮ್ಮನ ಮಗಳು ಆಸ್ಪತ್ರೆಯಲ್ಲಿದ್ದಳೆಂದು ನೋಡಲು ಹೋಗಿದ್ದೆ. ಮೂಳೆಗಳಿಗೆ ಕ್ಷಯ ತಗುಲಿ, ಔಷಧಿಗೆ ವಾಸಿಯಾಗದೆಂದು ಶಸ್ತ್ರ ಚಿಕಿತ್ಸೆ ಮಾಡಿದ್ದರು. ಹುಡುಕಿಕೊಂಡು ಹೋದ ನನಗೆ ಅವಳನ್ನು ಗುರುತು ಹಿಡಿಯುವುದೇ ಕಷ್ಟವಾಯಿತು. ಕಪ್ಪಗೆ, ಅನಾಥವಾಗಿ ತಲೆಯ ಮೇಲೆ ಕೈಯಿಟ್ಟು ಮಲಗಿದ್ದಳು. ಗುರುತು ಹಿಡಿದು ಹೋಗಿ ಎಬ್ಬಿಸಿದೆ. ಎಚ್ಚರವಾಗಿ ಕಣ್ಣು ಬಿಟ್ಟು ನೋಡಿದಳು. ದಪ್ಪಗೆ, ಎತ್ತರಕ್ಕೆ, ವಿಪರೀತ ಉದ್ದ ಜಡೆಯ ಅವಳೆಲ್ಲಿ ಬತ್ತಿ ಕಡ್ಡಿಯಾಗಿ, ಇಲಿ ಬಾಲದ ಜಡೆಯ ಇವಳೆಲ್ಲಿ ಎನಿಸಿತು. ರಾಕ್ಷಸಗಂಡ, ಪದೇ ಪದೇ ಬರುತ್ತಿದ್ದ ಫಿಟ್ಸ್‌ನೊಂದಿಗೆ ಈಗ ಕ್ಷಯವು ಸೇರಿ ಬತ್ತಿ ಹೋಗಿದ್ದಳು.

ಒಳ್ಳೆಯ ಕಡೆ ಕೆಲಸ ಮಾಡುತ್ತಿದ್ದವಳು, ಗಂಡನಿಗೆ ಇಷ್ಟವಿಲ್ಲವೆಂದು ಇದ್ದ ಕೆಲಸಕ್ಕೆ ಎಂದೋ ವಿದಾಯ ಹೇಳಿದ್ದಳು. ಹುಟ್ಟುವ ಮಕ್ಕಳೆಲ್ಲಾ ಹುಟ್ಟಿಯೋ ಹುಟ್ಟುವ ಮೊದಲೋ ಸಾಯುತ್ತಿದ್ದವು. ಒಂದೆರಡಲ್ಲ ಸುಮಾರು ಹತ್ತೋ, ಹನ್ನೊಂದು ಮಕ್ಕಳು. ಪ್ರತಿಸಾರಿಯ ಬಸಿರು, ಬಾಣಂತನದ ಜೊತೆಗೆ ಫಿಟ್ಸ್, ಗಂಡನ ಕಿರುಕುಳವೂ ಸೇರಿ ಚೇತರಿಸಿಕೊಳ್ಳಲಾರದಷ್ಟು ಮಾನಸಿಕ, ದೈಹಿಕ ಆಘಾತಕ್ಕೆ ಒಳಗಾಗಿದ್ದಳು. ಫಿಟ್ಸ್‌ಗೆಂದು ತೆಗೆದುಕೊಳ್ಳುತ್ತಿದ್ದ ಔಷಧಿಗಳನ್ನು ಈಗಲೂ ಅಮ್ಮನ ಮನೆಯವರೆ ಕೊಡಿಸುತ್ತಿದ್ದಾರೆ. ಫಿಟ್ಸ್ ಸಾಲದೆಂಬಂತೆ, ಕ್ಷಯವೂ ಬಂದೆರಗಿದೆ. ಈ ಖಾಯಿಲೆಗಳಿಗಾದರೂ ಮದ್ದುಂಟು. ಅವನೆಷ್ಟೇ ನೀಚನಿಗಲಿ ಅವನೊಂದಿಗೆ ಬದುಕಲೇ ಬೇಕೆನ್ನುವ ಹೇರಿಕೆಯನ್ನು ಪವಿತ್ರ ಬಂಧನವೆನ್ನುವ ಸಮಾಜದ ಕ್ಷಯಕ್ಕೆ ಔಷಧಿ ಎಲ್ಲಿ ಹುಡುಕಬೇಕು?

ಪ್ರಶ್ನೆಗಳ ತಕಧಿಮಿಯಲೇ ಪರಿಹಾರ ಏನಿರಬಹುದೆಂದು ಯೋಚಿಸುತ್ತಿದ್ದ ನನಗೆ, ಕಾಲು ಮುರಿದುಕೊಂಡು ಕುಳಿತಿದ್ದ "ಅವಳು" ಉತ್ತರ ರೂಪದಲ್ಲಿ ಕಂಡಳು. ಪುಟ್ಟದೇಹದ, ಚುರುಕುಗಣ್ಣಿನ, ಆತ್ಮ ವಿಶ್ವಾಸದಿಂದ ಮಿಂಚುತ್ತಿದ್ದ ಅವಳು ಸಮಾಜದ ಕ್ಷಯಕ್ಕೆ ಔಷಧವೇ ಸರಿ. ರೈಲ್ವೆ ಅಪಘಾತದಲ್ಲಿ ಇಡಿ ಒಂದು ಕಾಲು ಹಾಗು ಕೈಯನ್ನೆ ಮುರಿದುಕೊಂಡು (ಪಾಪ ಪೂರ್ತಿ ಜಜ್ಜಿಹೋಗಿತ್ತು) ಹಾಸಿಗೆಯ ಮೇಲೆ ಕೂತಿದ್ದ ಅವಳಲ್ಲಿ ಭರವಸೆ ಬರಿದಾಗಿರಲಿಲ್ಲ. ಧೈರ್ಯ ಕುಸಿದಿರಲಿಲ್ಲ. ಏನನ್ನಾದರೂ ಎದುರಿಸಿಯೇನು ಎನ್ನುವಂತಿತ್ತು ಅವಳು ಕುಳಿತ ಭಂಗಿ. ಯಾರ ಹಂಗೂ ಇಲ್ಲದೆ ಬದುಕಬೇಕೆನ್ನುವ ಹಠ, ಛಲ, ಸ್ವಾಭಿಮಾನವೇ ಅವಳ ಬದುಕಿನ ಆಸ್ತಿ. ಅವಳು ಸ್ವಾಭಿಮಾನದಿಂದ, ಆತ್ಮ ವಿಶ್ವಾಸದಿಂದ ಆಡಿದ ಮಾತು ಇನ್ನೂ ಕಿವಿಯಲ್ಲಿವೆ.

"ಮದುವೆ ಆಗಿ ಎರಡೇ ತಿಂಗ್ಳು ಅವ್ನು ಚೆಂದಾಗಿದ್ದಿದ್ದು, ಆಮ್ಯಾಲೆ ಅವ್ನ, ಮಗಂಗೆ ಸುರುವಾಯ್ತು ನೋಡು ಜಗಳ. ಬ್ಯಾರೆ ಓದ್ರೆ ಸರಿ ಒಯ್ತದೆ ಅಂತಾ ಬ್ಯಾರೆ ಓದ್ವಿ. ಅಲ್ಲೂ ಅಷ್ಟೇ ಎಲ್ಡು ದಿನ ಚನ್ನಾಗಿದ್ದ, ಆಮ್ಯಾಲೆ ಎದ್ರು ಮನೆ ಎಂಗ್ಸನ್ನ ಜತೆ ಆಕ್ಕಂಡ. ನನ್ನ, ನನ್ನ ಮಕ್ಕಳನ್ನ ಕ್ಯಾರೆ ಅನ್ನಲಿಲ್ಲ. ಒಂದ್ ಕಾಸೂ ಕೊಡ್ತಾ ಇರ್ಲಿಲ್ಲ. ನಂಗೂ ನೋಡಿ, ನೋಡಿ ರೋಸೋಯ್ತು, ಇವನ್ ಕೊಡೋದ್ಕೇನ್ ಕೈಯೊಡ್ಡೋದು ಅಂತಾ ಅವತ್ ತಲೆ ಮೇಲಿ ಒತ್ಕಂಡ್ ಮಂಕ್ರಿ ಕಾಲು ಮುರಿಯೋವದ್ಗೂ ಒತ್ತಿದೀನಿ. ತರಕಾರಿ, ಸೊಪ್ಪು, ಉಪ್ಪಿಂಕಾಯಿ ಎಲ್ಲಾ ಮಂಕ್ರಿಲಿ ವತ್ಕಂಡ್ ಯಾಪಾರ ಮಾಡ್ದೆ. ಯಪಾರ ಮಾಡಾಕೆ ಅಂತಾ ಓಲೆ, ಮೂಗ್ಬಟ್ಟು ಎಲ್ಲಾ ಮಾರ್ದೆ. ಜನ್ರ ನಂಬಿಕೆ ಸಂಪಾದಸ್ಕಳವರ್ಗೂ ಕಷ್ಟ ಆತು. ಕೈಯಿ, ಬಾಯಿ ಚೆನ್ನಾಗಿತ್ತು ಅಮ್ಮಾರೆ ನಾಕ್ ಜನ ಸಾಯಾನು ಮಾಡುದ್ರು. ನನ್ನ ಕೈಲಿ ಆಗೋವಷ್ಟು ದುಡ್ದೆ. ನನ್ನ ಮಕ್ಳನ್ನು ಸಾಕ್ದೆ ಈಗ್ಲೂ ಆಸ್ಪತ್ರೆ ಖರ್ಚಿಗೆ ಮನೇಲಿರೊ ಆಂಡೆ

ಕೊಳಗೆ ಮಾರ್ದನೇ ವರ್ತ್ರು ಗಂಡ ಅನ್ನೋನ ಕೈಲಿ ಏನು ತಗಳಿಲ್ಲ."

"ಆಸ್ಪತ್ರೆಗೆ ನೋಡಾಕೆ ಅಂತಾ ಬಂದ, ಕಾಲೂ ಮುರ್ಕೊಂಡು ಬಿದ್ದಿದ್ರು, ನಿನ್ನ ಜೋರು ಕಮ್ಮಿ ಆಗ್ಲಿಲ್ಲ ಅಂದ, ಅವನ್ ತಂದ ಅನ್ನ ಮುಖಕ್ಕೆ ಎಸ್ದು, "ದೇವ್ರು ಇನ್ನು ಒಂದು ಕೈಯಿ ಕಾಲು ಕೊಟ್ಟವ್ನೆ ದುಡಿಯೋಕೆ, ಅದು ಓಯ್ತು ಅಂದ್ರೆ ಆಸ್ಪತ್ರೆ ಮುಂದೆ ಕುತ್ಕಂಡ್ ಭಿಕ್ಷೆ ಎತ್ತಿ ನನ್ನ ಮಕ್ಳನಾ ಸಾಕ್ತೀನೇವರ್ತು ನಿನ್ನ ಎಂಜಲಿಗೆ ಕೈಯೊಡ್ಡಲ್ಲ" ಅಂದೆ. ನಾವ ದುಡೀಬೇಕಂ ನಮ್ ಒಟ್ಟೆ ಸಾಕೋಕೆ, ಗಂಡಸ್ರಗೆ ನಾವು ದುಡಿಯಾದು ಸರಿ ಬಿಳಾಕಿಲ್ಲ. ಕಾಸ್ಗೂ ಕೈ ಚಾಚೋದೆ ಇಷ್ಟ ಅವರ್ಗೆ; ಈ ಕೈಯಿ ದುಡೀಬೇಕು, ಈ ಬಾಯಿ ತಿನ್ಬೇಕು. ಜಲ್ಮ ಓದ್ರು ಯಾರ ತಾವೂ ಕೈ ಚಾಚಬಾರ್ದು" ಅಂದ್ಲು. ಅಸಾಧ್ಯವಾದುವಕ್ಕೆಲ್ಲಾ ಸಾಧ್ಯತೆಯನ್ನು ಸರಳವಾಗಿ ಹೇಳಿದಳು.

ಅವಳಿಗಿದ್ದ ಸ್ವಾಭಿಮಾನದ ಕಾಲುಭಾಗ ನನ್ನ ದೊಡ್ಡಮ್ಮನ ಮಗಳಿಗೆ ಇದ್ದಿದ್ದರೆ? ಎಂದುಕೊಳ್ಳುತ್ತಾ ಹಿಂತಿರುಗಿ ಬಂದೆ. ಮತ್ತೆ ಅಲ್ಲಿಗೆ ಹೋಗಲಾಗಲಿಲ್ಲ. ಎಲ್ಲಿದ್ದಾಳೊ? ಹೇಗಿದ್ದಾಳೊ? ಅವಳ ತಾಕತ್ತಿಗೆ ಭಲೆ ಎನ್ನಬೇಕು.

---

# ಲತಾ : ಸಾಧನೆ

ಉಜ್ವಲಾ ಜ. ಪುಣಜಗೌಡ.

---

ಇತ್ತೀಚಿನ ಪತ್ರಿಕೆಗಳ ಮುಖಪುಟಗಳನ್ನು ಆವರಿಸಿದ, ಬಹಳಷ್ಟು ಕಾಲಂಗಳನ್ನು ಕಬಳಿಸಿದ ವ್ಯಕ್ತಿ ಲತಾ ಮಂಗೇಶ್ಕರ್. ಲತಾ ಮಂಗೇಶ್ಕರರ ಹೆಸರನ್ನು ಕೇಳದವರಿಲ್ಲ. ದೇಶದ ಉದ್ದಗಲಗಳಲ್ಲೂ, ದೇಶದ ಆಚೆಗೂ ಲತಾ ಚಿರಪರಿಚಿತ. ಅವರ ಸಾಧನೆಯೋ ಮೂಗಿನ ಮೇಲೆ ಬೆರಳಿರಿಸುವಂಥದ್ದು. ಸುಮಾರು ೫೦ ವರುಷಗಳವರೆಗೂ ಚಿತ್ರರಂಗದಲ್ಲಿ ಅದ್ವಿತೀಯ ಗಾಯಕಿ ಎನಿಸಿಕೊಂಡು, ಮೆರೆದ ಲತಾ ಮಹಿಳೆಯರಿಗಂತೂ ಆದರ್ಶಪ್ರಾಯರೆನಿಸಿಕೊಂಡಿದ್ದಾರೆ.

ಲತಾ ಸೆಪ್ಟೆಂಬರ್ ೧೯೨೯ರಲ್ಲಿ ಮಂಗೇಶ್ಕರರ ಕುಟುಂಬದ ೪ ಜನ ಸಹೋದರಿಯರು ಒಬ್ಬ ಸಹೋದರರಲ್ಲಿ ಹಿರಿಯವರಾಗಿ ಹುಟ್ಟಿದರು. ತಂದೆ ದೀನಾನಾಥ ಮಂಗೇಶ್ಕರರು ನಾಟಕ ಕಂಪೆನಿಯೊಂದನ್ನು ನಡೆಸುತ್ತಿದ್ದರು. ಪಂ. ದೀನಾನಾಥರೇ ಲತಾರ ಶಾಸ್ತ್ರೀಯ ಸಂಗೀತದ ಮೊದಲ ಗುರು. ಟಾಕಿ ಸಿನಿಮಾಗಳ ಪ್ರಭಾವದಿಂದ ಪಂ. ದೀನಾನಾಥರಿಗೆ ತಮ್ಮ ನಾಟಕ ಕಂಪನಿಯನ್ನು ಮುಚ್ಚಬೇಕಾಗಿ ಬಂದ ಪ್ರಸಂಗ, ಮಂಗೇಶ್ಕರ್ ಕುಟುಂಬಕ್ಕೆ ಬಡತನದ ರುಚಿ ತೋರಿಸಿತು. ೧೯೪೨ರಲ್ಲಿ ದೀನಾನಾಥರ ಮರಣ ಒಂದು ದೊಡ್ಡ ಆಘಾತ. ಹಿರಿಯವಳಾದ ೧೪ ವರುಷದ ಲತಾ ಕುಟುಂಬದ ಭಾರವನ್ನು ಹೊರಬೇಕಾಗಿ ಬಂತು. ತಂದೆಯವರ ಮರಣದ ೮ ದಿನಗಳಲ್ಲೇ ಅವರು ಮರಾಠಿ ಚಿತ್ರವೊಂದರಲ್ಲಿ ನಟಿ ಮತ್ತು ಗಾಯಕಿಯಾಗಿ ಕೆಲಸ ಮಾಡುತ್ತಿದ್ದರು. ಸಂಗೀತ ನಿರ್ದೇಶಕ ಗುಲಾಮ್ ಹೈದರ್ ಲತಾಳನ್ನು ಹಿಂದಿ ಚಿತ್ರರಂಗಕ್ಕೆ ಗಾಯಕಿಯಾಗಿ ಪರಿಚಯಿಸಿದರು. ಚಿತ್ರ ಮಜಬೂರ್. ಆಗ ಲತಾರಿಗೆ ನೂರ್‌ಜಹಾನ್ ಗೀತಾರಾಯ್, ಶಂಶಾದ್ ಮತ್ತು ಸುರೈಯಾರಂಥ ಪ್ರಸಿದ್ಧ ಗಾಯಕಿಯರ ಸ್ಪರ್ಧೆಯನ್ನು ಎದುರಿಸಬೇಕಾಗಿ ಬಂತು. ತೆಳು ದನಿಯ ಲತಾ ಬದಲಾವಣೆಯ ಗಾಳಿಯಾಗಿ ಬಂದರು. ಮಹಲ್, ಅಂದಾಜ್, ಬರಸಾತ್ ಚಿತ್ರಗಳು ಇವರ ಸ್ಥಾನವನ್ನು ಭದ್ರಪಡಿಸಿದವು. ಅಶೋಕ್ ಕುಮಾರ್ ನಾಯಕರಾಗಿದ್ದ ಮಹಲ್‌ನಲ್ಲಿ ಇವರು ಹಾಡಿದ, "ಆಯೇಗಾ ಆಯೇಗಾ ಆಯೇಗಾ ಆನೇವಾಲಾ" ಹಾಡನ್ನು ಯಾರು ತಾನೇ ಮರೆಯಲು ಸಾಧ್ಯ? ಆಮೇಲೆ ಅವರು ಹಿಂತಿರುಗಿ

ನೋಡಿಯೇ ಇಲ್ಲ. ಹಿಂದಿಯ ಹೆಚ್ಚು ಕಡಿಮೆ ಎಲ್ಲ ಸಂಗೀತ ನಿರ್ದೇಶಕರೊಡನೆ ಅವರು ಕೆಲಸ ಮಾಡಿದರು, ಮಾಡುತ್ತಲೂ ಇದ್ದಾರೆ. ನೌಶಾದ್, ಮದನ್ ಮೋಹನ್, ಶಂಕರ್–ಜೈಕಿಶನ್, ಎಸ್. ಡಿ. ಬರ್ಮನ್, ಆರ್. ಡಿ. ಬರ್ಮನ್, ರವೀಂದ್ರ ಜೈನ್, ಕಲ್ಯಾಣ್‌ಜೀ —ಆನಂದ್‌ಜೀ, ಲಕ್ಷ್ಮಿ — ಪ್ಯಾರೇ, ಖಯ್ಯಾಂ, ಜಯದೇವ, ಸಲೀಲ್ ಚೌಧರಿಯವರಿಂದ ಹಿಡಿದು ಇತ್ತೀಚಿನ "ಮೈನೇ ಪ್ಯಾರ್ ಕಿಯಾ" ಖ್ಯಾತಿಯ ರಾಮ್ ಲಖನ್‌ರವರೆಗೂ ಎಲ್ಲರೊಡನೆ ಹಾಡಿ ೨೫,೦೦೦ಕ್ಕೂ ಹೆಚ್ಚು ಹಾಡುಗಳಿಂದ ಸಂಗೀತ ಪ್ರೇಮಿಗಳನ್ನು ರಂಜಿಸಿದ್ದಾರೆ. ಇವರನ್ನು ಹಾಡಿಸಿಕೊಳ್ಳದ ಅಥವಾ ಬಯಸದ ನಿರ್ದೇಶಕ ಎಂದರೆ, ಓ. ಪಿ. ನಯ್ಯರ್ ಒಬ್ಬರೇ ಇರಬೇಕು. ಮಹಮ್ಮದ್ ರಫಿಯಿಂದ ಹಿಡಿದು ಮುಖೇಶ್, ನಂತರ ಕಿಶೋರ್ ಕುಮಾರ್, ಎಸ್. ಪಿ. ವರೆಗೆ ಎಲ್ಲರೂ ಇವರ ಸಹಿತ ಕಲಾವಿದರಾಗಿ ಇವರೊಡನೆ ಹಾಡಿದ್ದಾರೆ. ರಾಜ್ ಕಪೂರ್, ಶಂಕರ್ — ಜೈಕಿಶನ್‌ರ ಖಾಯಂ ಗಾಯಕಿಯಾಗಿ ಅವರ ಯಶಸ್ಸಿಗೆ ತಮ್ಮ ಪಾಲನ್ನೂ ನೀಡಿದ್ದಾರೆ.

ಲತಾರ ಪ್ರವಾಹದಲ್ಲಿ ಅನೇಕ ಯುವ ಪ್ರತಿಭೆಗಳು ಕೊಚ್ಚಿಕೊಂಡು ಹೋಗಿವೆ ಎಂಬ ಅಪವಾದವೂ ಇದೆ. ಆದರೆ ಇವರು ತಮ್ಮ ಸಹೋದರ ಸಹೋದರಿಯರಿಗಷ್ಟೇ ಅಲ್ಲ, ಅನೇಕ ಪ್ರತಿಭೆಗಳಿಗೆ ಚಿತ್ರರಂಗದಲ್ಲಿ ನೆಲೆಯೂರಲು ಅವಕಾಶ ಮಾಡಿಕೊಟ್ಟಿದ್ದಾರೆಂಬುದು ಸುಳ್ಳಲ್ಲ. ಎಷ್ಟೋ ನಿರ್ದೇಶಕ ಜೋಡಿಗಳ ಬೆನ್ನುತಟ್ಟಿ ಮುಂದೆ ತಂದಿದ್ದಾರೆ. ಲತಾರ ದನಿ ದೈವದತ್ತವಾದದ್ದು ಎನ್ನುವವರಿದ್ದಾರೆ. ಆದರೆ ಯಶಸ್ಸು? ತಾನು ಪಡೆದುದಕ್ಕಾಗಿ ಭಾರೀ ಬೆಲೆಯನ್ನೇ ತೆತ್ತಿರುವುದಾಗಿ ಲತಾ ಹೇಳುತ್ತಾರೆ. "ನನ್ನ ದಿನಚರಿ ಆಗ ೪.೩೦ ಕ್ಕೆ ಆರಂಭವಾಗುತ್ತಿತ್ತು ಕೆಲವು ಗಂಟೆಗಳವರೆಗೆ ಅಭ್ಯಾಸ ಮಾಡಿ ಸ್ಟುಡಿಯೋಗೆ ಹೋದರೆ ದಿನವೆಲ್ಲ ರಿಹರ್ಸಲ್ಲುಗಳು, ರಿಕಾರ್ಡಿಂಗ್‌ಗಳು ನಡೆಯುತ್ತಿದ್ದವು. ಮನೆಗೆ ಮರಳುವುದರಲ್ಲಿ ಅರ್ಧ ರಾತ್ರಿ ಕಳೆದಿರುತ್ತಿತ್ತು. ಕೆಲವೊಮ್ಮೆ ರಾತ್ರಿಯ ಊಟಕ್ಕೆ ಕುಳಿತುಕೊಳ್ಳುವಾಗ ೨-೩೦ ಮತ್ತೆ ಬೆಳಗ್ಗೆ ೪-೩೦ ಕ್ಕೆ ಏಳುವುದು ಇಂಥ ದಿನಚರಿಯಿಂದ ಅನೇಕ ದೈಹಿಕ ತೊಂದರೆಗಳನ್ನು ಎದುರಿಸಬೇಕಾಗುತ್ತಿತ್ತು." ಪರಿಶ್ರಮದಲ್ಲಿ ಮತ್ತು ಹಿಡಿದ ಕೆಲಸವನ್ನು ಬಿಡದ ಛಲದಲ್ಲಿ ಲತಾರಿಗೆ ವಿಶ್ವಾಸ ಹೆಚ್ಚು. ಒಂದೇ ಶಬ್ದದಲ್ಲಿ ನಿಮ್ಮನ್ನು ವರ್ಣಿಸಿಕೊಳ್ಳಿರಿ ಎಂದಾಗ ಲತಾರ ಶಬ್ದ "ಸಂಗೀತ."

ಲತಾರಿಗೆ ದೊರಕಿದ ಪ್ರಶಸ್ತಿಗಳ ಲೆಕ್ಕವಿಲ್ಲ, ಫಿಲ್ಮ್ ಫೇರ್‌ನ ಪ್ರಶಸ್ತಿಗಳು, ೧೯೬೯ರಲ್ಲಿ ಪದ್ಮಭೂಷಣ ಪ್ರಶಸ್ತಿ, ೧೯೮೮ರಲ್ಲಿ ಸಂಗೀತ ನಾಟಕ ಅಕಾಡೆಮಿಯ ಫೆಲೋಶಿಪ್, ಮಧ್ಯಪ್ರದೇಶ ಸರಕಾರ ಲತಾರ ಹೆಸರಿನಲ್ಲೇ ಒಂದು ಪ್ರಶಸ್ತಿಯನ್ನೇ ಸ್ಥಾಪಿಸಿದೆ. ಈಗ ಚಿತ್ರರಂಗದ ಅತ್ಯುನ್ನತ ಪ್ರಶಸ್ತಿ ದಾದಾ ಸಾಹೇಬ್ ಫಾಲ್ಕೆ. ಮಾನ್ಯ ವೆಂಕಟರಾಮನ್‌ರಿಂದ ಮೇ ೭ರಂದು ಫಾಲ್ಕೆ ಪ್ರಶಸ್ತಿಯನ್ನು ಸ್ವೀಕರಿಸಿದಾಗ ದೇಶವೇ ಚಪ್ಪಾಳೆ ತಟ್ಟಿತು, ತಲೆದೂಗಿತು. ದಾದಾ ಸಾಹೇಬ್ ಫಾಲ್ಕೆ ಪ್ರಶಸ್ತಿ ಸ್ವೀಕರಿಸಿದ ಐದನೆಯ ಮಹಿಳೆ ಲತಾ. ಆದರೆ ಲತಾ ಎಷ್ಟೋ ವಿಷಯಗಳಲ್ಲಿ ಮೊದಲಿಗರು ಯಾರೂ ತಲುಪಲಾಗದ ಎತ್ತರ ಅವರದನಿ, ತಲೆ ಎತ್ತಿ ನೋಡಬಹುದಷ್ಟೇ. ಅವರ ವ್ಯಕ್ತಿತ್ವದ ಚಿತ್ರಣ ಇದಲ್ಲ, ನನ್ನ ಮಿತಿಯಿದು, ಹಿಂದಿ ಚಿತ್ರರಂಗ ಮಂಗೇಶ್‌ಕರ್ ಕುಟುಂಬದ ಕಾಣಿಕೆಯನ್ನು ಮರೆಯುವಂತಿಲ್ಲ. ಅದರಲ್ಲಿ ಲತಾರಿಗೋ ತನ್ನ ಇತಿಹಾಸದಲ್ಲಿ ಎಷ್ಟೋ ಪುಟಗಳನ್ನು ಕೊಡಬೇಕಾಗುವುದೆಂಬುದನ್ನು ಅದುವೇ ನಿರ್ಧರಿಸಬೇಕು.

ಭಾರತದ ನಂದನದಲ್ಲಿ ಲತಾ ಎಂಬ ಕೋಗಿಲೆ ಹಾಡುತ್ತಲೇ ಇರಲೆಂಬುದು ನನ್ನಾಸೆ,

# ಅಕ್ಕ ಪಕ್ಕ

ಬಿ.ಟಿ.ಎಸ್. ಬಸ್ಸುಗಳಲ್ಲಿ ಹೆಣ್ಣುಮಗಳಿಗೆ ಆಗುತ್ತಿರುವ ತೊಂದರೆಯಿಂದ ಹೆಂಗಸರು ಸಾರ್ವಜನಿಕ ಸಾರಿಗೆಯಲ್ಲಿ ಪ್ರಯಾಣ ಮಾಡುವುದೇ ಕಷ್ಟವೆನ್ನುವ ವಾತಾವರಣ ನಿರ್ಮಾಣವಾಗುತ್ತಿದೆ.

ಅಮೃತಾ ನಾರಾಯಣ
ಕನ್ನಡ ಶಕ್ತಿಕೇಂದ್ರ

ಮಹಿಳೆಯರಿಗೆ ಅದರಲ್ಲೂ ವಿಶೇಷವಾಗಿ ಪರಿಶಿಷ್ಠ ಜಾತಿ ಪರಿಶಿಷ್ಠ ಪಂಗಡದರಿಗೆ ಹಾಗೂ ವಿಧವೆಯರಿಗೆ ವೃತ್ತಿ ತರಬೇತಿ ನೀಡುವುದು ಮಹಿಳಾ ಕಲ್ಯಾಣ ಯೋಜನೆಯ ಪರಿಕಲ್ಪನೆ.

ಕೆ. ಸಿ. ಲಕ್ಷ್ಮಿದೇವಿ
ಬೆಂಗಳೂರು ನಗರದ ಉಪಮೇಯರ್

ಭಾರತೀಯ ಸಮಾಜದಲ್ಲಿ ವೇಶ್ಯೆಯರ ಬಗ್ಗೆ ಇಬ್ಬಗೆಯ ನೀತಿ ಅನುಸರಿಸಲಾಗುತ್ತಿದೆ. ಈ ವೃತ್ತಿಗೇ ಅಂಟಿರುವ ಕಳಂಕದಿಂದಾಗಿ ಆಕೆ ಬೇರೆ ದಾರಿಯೇ ಇಲ್ಲದೆ ಇದೇ ವೃತ್ತಿಯಲ್ಲೇ ಮುಂದುವರಿಯಬೇಕಾಗಿದೆ. ಗಂಡಿನ ಲೈಂಗಿಕ ಅನಾಚಾರವನ್ನು ಕ್ಷಮಿಸುವ ನಮ್ಮ ಸಮಾಜ ಹೆಣ್ಣಿನ ಚಾರಿತ್ರ್ಯದ ಬಗ್ಗೆ ಮಾತ್ರಾ ಅಪಾರ ಒತ್ತಡ ಹೇರಿ ಇಬ್ಬಗೆಯ ನೀತಿ ಪ್ರದರ್ಶಿಸುತ್ತಿದೆ.

ಅನೂರ್ಜಿತ್ ಕೌರ್
ಕೇಂದ್ರ ಸಮಾಜ ಕಲ್ಯಾಣ ಮಂಡಳಿಯ ಅಧ್ಯಕ್ಷೆ

ವೇಶ್ಯೆಯರನ್ನು ಶಿಕ್ಷೆಗೆ ಗುರಿಪಡಿಸುವ ಬದಲು ವೇಶ್ಯಾವಾಟಿಕೆ ನಡೆಸುವವರು ಮತ್ತು ಗಿರಾಕಿಗಳನ್ನು ಶಿಕ್ಷಿಸುವ ಪ್ರಯತ್ನ ಮಾಡಬೇಕು.

ಪ್ರಮೀಳಾ ದಂಡವತೆ
ಮಹಿಳಾ ರಕ್ಷಕ್ ಸಮಿತಿಯ ಅಧ್ಯಕ್ಷೆ

ವಿವಾಹ, ಮನೆ ಮುರುಕರು ಹೆಂಗಸರು ಗಂಡಸರಲ್ಲ.

ಅರುಣಾ ರಾಜೇ ಪಾಟೀಲ್
ಖ್ಯಾತಚಿತ್ರ "ರಿಹಾಯಿಯ" ನಿರ್ದೇಶಕಿ

ತೆರೆಯ ಮೇಲೆ ತಾಯಿಯಾದವಳು ತನ್ನ ಮಗನಿಗಾಗಿ ನೂರು ಭಾಷಣಗಳನ್ನು ಕೊಡುತ್ತಾಳೆ. ಸಾವಿರ ತ್ಯಾಗಮಾಡುತ್ತಾಳೆ. ಮಗ ಒಬ್ಬ ಕಳ್ಳಸಾಗಾಣಿಕೆದಾರನಾಗಿ ಪರಿವರ್ತನೆಗೊಂಡಾಗ ಅವನ ದೇಹಕ್ಕೆ ಸಾವಿರ ಗುಂಡುಗಳನ್ನು ಹೊಡೆಯುತ್ತಾಳೆ.

ವಹೀದಾ ರೆಹಮಾನ್
ಸಿನಿಮಾ ನಟಿ

ನಾನು 16 ರ ಹರೆಯದವಳೂ ಅಲ್ಲ ಸೋನಂ ಕೂಡ ಅಲ್ಲವಾದ್ದರಿಂದ ಆಕೆ ಮಾಡುವಂಥದನ್ನು ನಾನು ಮಾಡಲು ಇಷ್ಟಪಡುವುದಿಲ್ಲ. ನಾನು ವಹಿಸಬಹುದಾದಂಥ ಪಾತ್ರವನ್ನು ನಾನೇ ಸೃಷ್ಟಿಸಿಕೊಳ್ಳಬೇಕು

ಸುಷ್ಮಿತ ಮುಖರ್ಜಿ
ಟಿ. ವಿ. ತಾರೆ

ಮೊಟ್ಟಮೊದಲ ಪ್ರಖ್ಯಾತ ಮಹಿಳಾ ಕೊಳಲುವಾದಕಿ ಎಂದು ಬೇಕಾದರೆ ನನ್ನನ್ನು ಕರೆಯಬಹುದು.

ಟಿ. ಆರ್. ನವನೀತಂ

ನೀವೇ ಮೊದಲ ಮಹಿಳಾ ಕೊಳಲುವಾದಕಿಯಲ್ಲವೆ ?ಎಂದು ಪ್ರಶ್ನಿಸಿದಾಗ

ಮಹಿಳೆಯರ ಅನುಕೂಲಕ್ಕಾಗಿ ಸಧ್ಯ ಬೆಂಗಳೂರಿನಲ್ಲಿ 22 ಟ್ರಿಪ್‌ಗಳನ್ನು ಓಡಿಸಲಾಗುತ್ತಿದ್ದು ಹೆಚ್ಚು ಬಸ್‌ಗಳನ್ನು ಓಡಿಸಲು ಪರಿಶೀಲನೆ ಮಾಡಲಾಗದು.

ಕೆ. ಜಿ. ಜಾರ್ಜ್
ಕರ್ನಾಟಕ ರಾಜ್ಯ ಸಾರಿಗೆ ಸಚಿವ

ನನಗೆ 58 ವರ್ಷ. ಗಂಡನಿಲ್ಲ, ಮಕ್ಕಳಿಲ್ಲ, ಸಂಬಂಧಿಕರಿಲ್ಲ ಸ್ನೇಹಿತರಿಲ್ಲ ನಾನು ಏಕಾಕಿ.

ನಾದಿರಾ
ಹಳೆಯ ಚಿತ್ರನಟಿ

10ನೇ ಪುಟದಿಂದ

ಶೈಲಿ ಮಾತ್ರ ಆಡಂಬರಕ್ಕೆ ಸಿಲುಕದೆ ಅತ್ಯಂತ ಸರಳವಾದ ರೀತಿಯಲ್ಲಿ ಸಾಗುತ್ತಿತ್ತು.

ಶ್ರೀಮತಿ ಕಾರ್ಪೆಂಟರ್ ಆನಂದಿಯವರಿಗೆ ಮಾನಸಿಕ ಸಂತೋಷ ಕೊಡುವುದರ ಜೊತೆಗೆ ಒಳ್ಳೆಯ ಮಾರ್ಗದರ್ಶಿನಿಯಾಗಿದ್ದಳು. ಅವಳು ಆನಂದಿಯವರು ಹೊಸ ಜಗತ್ತಿಗೆ ಹೇಗೆ ಹೊಂದಿಕೊಳ್ಳಬೇಕೆಂಬುದನ್ನು ಹೇಳಿಕೊಡುತ್ತಿದ್ದಳು. ಮುಂದೆ ಕಾರ್ಪೆಂಟರ್ ಆನಂದಿಯವರಿಗೆ ಒಂದು ಸಣ್ಣ ಪ್ರಶ್ನಾವಳಿಯನ್ನು ಕೊಟ್ಟು ಅದಕ್ಕೆ ಉತ್ತರವನ್ನು ಬರೆಯಲು ತಿಳಿಸಿದಳು. ಕಾರ್ಪೆಂಟರ್‌ಳ ಸಂವೇದನಾ ಪ್ರಶ್ನೆಗಳಿಗೆ ಆನಂದಿಯವರ ಸಮಂಜಸವಾದ ಉತ್ತರವನ್ನು ನೋಡಿ ಕಾರ್ಪೆಂಟರ್ ದಿಗ್ಭ್ರಮೆಗೊಂಡರು. ೧೯ ವರ್ಷದ ಆನಂದಿಯವರು ಬರೆದ ಉತ್ತರವು ಅವರ ಮನೋಭಾವದ ಪರಿ ಪಕ್ವತೆಯನ್ನು ಪ್ರಕಟ ಪಡಿಸುತ್ತಿತ್ತು.

ಮುಂದೆ ಆನಂದಿಯವರನ್ನು ೨ ವಿಷಯಗಳು ಬಾಧಿಸತೊಡಗಿತು. ಒಂದು ಅವರ ಆರೋಗ್ಯ ಅವರು ಆರೋಗ್ಯದ ಕಡೆ ಸಾಕಷ್ಟು ಗಮನ ಹರಿಸಿದ ಕಾರಣ ಅದು ಹದಗೆಡುತ್ತಾ ಬರುತ್ತಿತ್ತು. ಮತ್ತೊಂದು ಅವರ ಪತಿಯ ವಿಷಯ ತನ್ನ ಪತಿಯಿಂದ ಸಾವಿರಾರು ಮೈಲಿ ದೂರವಿದ್ದು ತಾನು ಅವರ ಆರೋಗ್ಯದ ಬಗ್ಗೆ ಏನೂ ಕಾಳಜಿ ತೆಗೆದು ಕೊಳ್ಳಲಾಗುತಿಲ್ಲವಲ್ಲವೆಂಬ ಕೊರಗು.

ಆದರೆ ಗೋಪಾಲ್‌ರವರು ಸ್ವಭಾವದಲ್ಲಿ ಸಂಪೂರ್ಣ ಬದಲಾಯಿಸಿದ್ದರು. ಅವರಿಗೆ ಆನಂದಿಯವರು ಹೊರ ದೇಶದಲ್ಲಿ ಇದ್ದು ಶಿಕ್ಷಣ ಪಡೆದುಕೊಂಡು ಸುಖದೀದಿರುವಳು ಎಂಬ ಕಲ್ಪನೆ. ಇದರಿಂದ ತಮ್ಮ ಪತ್ನಿಗೆ ಬಲು ಕಟುವಾಗಿ ಪತ್ರ ಬರೆಯುತ್ತಿದ್ದರು. ಆದರೆ ಆನಂದಿಯವರು ವಾರಕ್ಕೊಮ್ಮೆ ಗೋಪಾಲ್‌ರವರಿಗೆ ಪತ್ರ ಬರೆಯುತ್ತಿದ್ದರು. ಅದರಲ್ಲಿ ತನ್ನ ವಿಧ್ಯಾಭ್ಯಾಸದ ಬಗ್ಗೆ ಬರೆದು ಪತಿಯ ಪ್ರೋತ್ಸಾಹವನ್ನು ಕೋರುತ್ತಿದ್ದರು. ಆದರೆ ಗೋಪಾಲ್‌ರವರ ಕಟುವಾದ ಪತ್ರಗಳು ಆನಂದಿಯವರನ್ನು ಮಾನಸಿಕವಾಗಿ ನೋಯಿಸುತ್ತಿತ್ತು.

ಪದವಿ ಪಡೆಯುವ ಎಷ್ಟೋ ತಿಂಗಳುಗಳ ಮೊದಲೇ ಅವರಿಗೆ ತಾಯ್ನಾಡಿನ ಮನೆಗೆ ಹಿಂದಿರುಗುವ ಕಾತರತೆ ಮೂಡಿತ್ತು. ಅಷ್ಟರಲ್ಲಾಗಲೇ ಅವರು ಮಹಾರಾಷ್ಟ್ರದ ಕೊಲ್ಲಾಪುರದಲ್ಲಿರುವ ಆಲ್ಬರ್ಟ್ ಎಡ್ವರ್ಡ್ ಆಸ್ಪತ್ರೆಯ ಸ್ತ್ರೀ ವಿಭಾಗದ ಮುಖ್ಯಸ್ಥೆಯಾಗಿ ನೇಮಕಗೊಂಡಿದ್ದರು. ಅವರು ಇಲ್ಲಿ ಕೆಲಸ ಮಾಡಲು ಕಾತರದಿಂದ ಕಾಯುತ್ತಿದ್ದರು.. ಆದರೆ ಈ ರೀತಿ ಆಗಲಿಲ್ಲ. ಆನಂದಿಯವರಿಗೆ ತನ್ನ ದೇಶದ ಸೋದರಿಯರನ್ನು ರೋಗರುಜನಗಳಿಂದ ಮುಕ್ತಗೊಳಿಸಬೇಕೆಂಬ ಹಂಬಲವಿತ್ತೆ ಹೊರತು ತನ್ನ ಆರೋಗ್ಯದ ಕಡೆ ಗಮನ ಹರಿಸುವಷ್ಟು ವ್ಯವಧಾನವಿರಲಿಲ್ಲ. ಅವರಿಗೆ ಆಗಲೇ ಕ್ಷಯರೋಗ ಅಂಟಿತ್ತು. ಅಂದು ಕ್ಷಯರೋಗ ಜೀವ ತೆಗೆಯುವ ಕಾಯಿಲೆಯಾಗಿತ್ತು.

೧೮೮೬ ಮಾರ್ಚ್ ೪ರಂದು ಆನಂದಿಯವರು ಡಿಗ್ರಿ ಪಡೆದುಕೊಂಡರು. ಅಕ್ಟೋಬರ್‌ನಲ್ಲಿ ತಮ್ಮ ಪತಿಯೊಡನೆ ಭಾರತಕ್ಕೆ ಹಿಂದಿರುಗಿದರು. ದಂಪತಿಗಳು ಅಮೇರಿಕಾದಿಂದ ಬಾಂಬೆಗೆ ಬಂದಾಗ ಅವರನ್ನು ಸ್ವಾಗತಿಸುವುದು ಜನ ಸಾಗರವೇ ಸೇರಿತ್ತು. ಆನಂದಿಯವರು ಊಹಿಸಿದಂತೆ ಅಲ್ಲಿ ಕ್ರೂರ ವರ್ತನೆ, ವಿಮರ್ಶೆ, ಖಂಡನೆಗಳಿರಲಿಲ್ಲ. ಬದಲಾಗಿ ಅವರಿಗೆ ಅಲ್ಲಿನ ಜನರ ಹೊಗಳಿಕೆ, ಸನ್ಮಾನ, ಗೌರವಗಳನ್ನು ಕಂಡು ಆಕೆ ದಿಗ್ಭ್ರಮೆಗೊಂಡರು.

ಡಾ। ಆನಂದಿಯವರು ವೈದ್ಯಳಾಗಿ ಭಾರತಕ್ಕೆ ಹಿಂದಿರುಗುವ ಕನಸನ್ನು ನನಸಾಗಿಸಿಕೊಂಡಿದ್ದರು. ಅವರ ಹಡಗಿನ ಯಾನದಿಂದ ಅವರ ಕಾಯಿಲೆ ಉಲ್ಬಣಗೊಂಡಿತ್ತು. ತಮ್ಮ ೨೨ನೇ ಜನ್ಮ ದಿನೋತ್ಸವ ಇನ್ನು ಒಂದು ತಿಂಗಳಿದೆ ಎನ್ನುವಾಗಲೇ ಅಂದರೆ ೧೮೮೭ ಫೆಬ್ರುವರಿ ೨೬ರಂದು ತಮ್ಮ ಪತಿಯ ತೋಳಾಸರೆಯಲ್ಲಿ ಮಡಿದರು. ಅವರ ಕೊನೆಯ ಮಾತೆಂದರೆ "ನನ್ನ ಕೈಲಾದ್ದನ್ನೆಲ್ಲಾ ನಾನು ಮಾಡಿದೆ" ಎಂದು.

ಅವರು ತನ್ನ ಭಾರತದ ಸೋದರಿಯರಿಗೆ ಏನೂ ಮಾಡದಿದ್ದರೂ, ಭಾರತದ ಮಹಿಳೆಯರಿಗೆ ಒಂದು ದೀಪವಾದರು. ಜೊತೆಗೆ ದಾರಿಯನ್ನು ನಮಗಾಗಿ ಸುಗಮಗೊಳಿಸಿದರು. ಮುಂದಿನ ಶತಮಾನದಲ್ಲಿ ಭಾರ

ತದಲ್ಲಿ ಪ್ರಪಂಚದ ಅತ್ಯುತ್ತಮ ಮಹಿಳಾ ವೈದ್ಯರ ಉದಯಕ್ಕೆ ಆನಂದಿಯವರ ಕೊಡುಗೆ ಮರೆಯಲಾರದ್ದು. ಆನಂದಿಯವರು ಸಮಾಜ ಸುಧಾರಕರಿಗೆ ಉತ್ತಮ ಪ್ರೇರಣೆಯಾದರು. ಅವರ ಜೀವನ ಚರಿತ್ರೆ ಕಥೆಗಾರರಿಗೆ ಹಾಗೂ ನಾಟಕ ಬರೆಯುವವರಿಗೆ ಒಂದು ಅಮೂಲ್ಯ ವಸ್ತುವಾಯಿತು. ಎಸ್. ಜಿ. ಜೋಷಿ ಎಂಬುವವರು ಆನಂದಿಯವರ ಜೀವನ ಚರಿತ್ರೆಯನ್ನೂ ಹಾಗೂ "ಆನಂದಿ ಗೋಪಾಲ" ಎಂಬ ಪುಸ್ತಕದ ಸಹಾಯದಿಂದ ಒಂದು ನಾಟಕವನ್ನು ಬರೆದರು, ಇದು ಮರಾಠಿ ರಂಗ ಮಂಚದದಲ್ಲೇ ಅತ್ಯಂತ ಪ್ರಖ್ಯಾತ ಹೊಂದಿತು,

ಸಿ. ಜಿ ಉಷಾದೇವಿ ಮತ್ತು ಜಯಶ್ರೀ

---

ಹೆಣ್ಣು ಶಿಶುವಿನ ವರ್ಷದ ನೆನಪಿಗಾಗಿ.........

## ಬಾಲಕಿಯರನ್ನು ಬಂಧಿಸುವ ಕುರುಡು ನಂಬಿಕೆಗಳು

**ಋತುಸ್ರಾವ ಒಂದು ಜೈವಿಕ ಕ್ರಿಯೆ. ಆದರೆ ಅದರ ಸುತ್ತ ಹೆಣೆರುದಿವ ಪಿತೃಪ್ರಧಾನ ನಂಬಿಕೆಗಳು, ಸ್ತ್ರೀಯರ ಜೀವನದ ಮಹತ್ವದ ಘಟ್ಟವಾದ ಇದು ಅವಳ ಭವಿಷ್ಯವನ್ನು ರೂಪಿಸುವಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತದೆ. ಸ್ತ್ರೀಯ ದೇಹದಲ್ಲಿ ಉಂಟಾಗುವ ಈ ಬದಲಾವಣೆಯ ಹಿಂದಿರುವ ನಂಬಿಕೆಗಳನ್ನು, ಅವುಗಳು ಬಾಲಕಿಯರ ಮೇಲೆ ಉಂಟುಮಾಡುವ ಪರಿಣಾಮವನ್ನು ವಿಶ್ಲೇಷಿಸಲಾಗಿದೆ.**

ಪುರುಷ ಪ್ರಾಧಾನ್ಯತೆಯಿರುವ ನಮ್ಮ ದೇಶದ ಸಂಸ್ಕೃತಿಯಲ್ಲಿ ಸ್ತ್ರೀಯ ಜೀವನ ಪೂರ್ವ ನಿಯೋಜಿತ, ನಾಟಕದ ಅಂಕದಂತೆ ಒಂದಾದ ಮೇಲೊಂದರಂತೆ ಕಡ್ಡಾಯವಾಗಿ ನಡೆಯಬೇಕು. ತುಳಿದ ಹೆಜ್ಜೆಯ ಹಿಂತಿರುಗಿ ನೋಡಬೇಕಾಗಿಲ್ಲ. ಮುಂದಿಡಬೇಕಾದ ಹೆಜ್ಜೆಗಳ ಬಗ್ಗೆ ಆತಂಕವಿಲ್ಲ, ಎಲ್ಲಾ ಮೊದಲೇ ನಿರ್ಧರಿತವಾಗಿರುತ್ತದೆ. ಈ ಯೋಜಿತ ಜೀವನ ಚಕ್ರದಿಂದ ಬಿಡಿಸಿಕೊಳ್ಳುವುದು ಸರಳವೇನಲ್ಲ.

ಸಂಪ್ರದಾಯದ ಸಂಕೋಲೆಗಳಿಂದ ಸ್ತ್ರೀಯ ಜೀವನ ಬಿಗಿಯಾಗಿ ಬಂಧಿಸಲ್ಪಟ್ಟಿವೆ. ಅವಳು ಸ್ತ್ರೀಯಾಗಿರುವ ಕಾರಣದಿಂದ ಅವಳ ದೇಹದಲ್ಲಿ ಕಾಲ ಕಾಲಕ್ಕೆ ಉಂಟಾಗುವ ಬದಲಾವಣೆಗಳ ಸುತ್ತ ಹಲವಾರು ಮಿಥ್ಯ ಕತೆಗಳು, ಉಸಿರುಗಟ್ಟಿಸುವ ಸಂಪ್ರದಾಯಗಳು, ಮೂಢನಂಬಿಕೆಗಳು ನಿರಂತರವಾಗಿ ಗಿರಕಿ ಹೊಡೆಯುತ್ತವೆ. ಅನೂಚಾನವಾಗಿ ನಡೆದುಕೊಂಡು ಬಂದ ಸಂಪ್ರದಾಯಗಳು ಸುಲಭವಾಗಿ ಬದಲಾವಣೆಯ ಪ್ರಯತ್ನದ ಕೈಗೆ ಎಟುಕುವುದಿಲ್ಲ,

ಸ್ತ್ರೀಯ ದೈಹಿಕ ರಚನೆಯ ಸುತ್ತ ಆವರಿಸಿರುವ ಕುರುಡು ನಂಬಿಕೆಗಳು ಪಿತೃಪ್ರಧಾನವಾಗಿದ್ದು, ಅವಳ ಬದುಕನ್ನು ನಿರ್ಧರಿಸುವಲ್ಲಿ ಗಣನೀಯ ಪಾತ್ರವನ್ನು ವಹಿಸುತ್ತವೆ. ಸಾಮಾನ್ಯವಾಗಿ ೧೧ ರಿಂದ ೧೬ ಅಥವಾ ೧೮ರ ಒಳಗೆ ಬಾಲಕಿಯರ ದೇಹದಲ್ಲಿ ಉಂಟಾಗುವ ಸಹಜವಾದ, ಜೈವಿಕವಾದ ಬದಲಾವಣೆಯ ಸುತ್ತ ಬೆಳೆದು ಬಂದಿರುವ ನಂಬಿಕೆಗಳನ್ನು ವಿಶ್ಲೇಷಿಸಿದರೆ ಅವುಗಳ ಹಿಂದಿರುವ ಅರ್ಥ ವ್ಯಕ್ತವಾಗುತ್ತದೆ. ಇಂತಹ ಕುರುಡು ನಂಬಿಕೆಗಳು ಉಂಟುಮಾಡುವ

ಮಾನಸಿಕ ಪರಿಣಾಮ ಸಂಕೀರ್ಣವಾದದ್ದು.

ಹುಡುಗಿಯರು ಸಾಮಾನ್ಯವಾಗಿ ೧೧-೧೪ ವರ್ಷ ವಯಸ್ಸಿನೊಳಗೆ ಪ್ರಾಯಕ್ಕೆ ಬರುತ್ತಾರೆ. ಆಕೆಯ ದೇಹದಲ್ಲಿ ಅನೇಕ ಆಂರಿಕ ಮತ್ತು ಬಾಹ್ಯ ಬದಲಾವಣೆಗಳಾಗುತ್ತವೆ. ಪಿಟ್ಯುಟರಿ ಗ್ರಂಥಿಯ ಸ್ರವಿಕೆಯಿಂದ ಕ್ರಿಯಾಶೀಲಗೊಂಡ ಅಂಡಾಶಯಗಳಿಂದ "ಋತು ಚಕ್ರ" ಪ್ರಾರಂಭವಾಗುತ್ತದೆ. ಒಂದು ಋತುಚಕ್ರ ಪೂರ್ಣಗೊಳ್ಳಲು ಸಾಮಾನ್ಯವಾಗಿ ೨೮ ದಿನಗಳು ಬೇಕು. ಪಿಟ್ಯುಟರಿ ಗ್ರಂಥಿಯ ಮುಂಭಾಗ ಅಂಡಾಶಯವನ್ನು ಪ್ರಚೋದಿಸುವಂತಹ (ಗೊನೆಡೊಟ್ರೊಫಿಕ್)ಹಾರ್ಮೊನುಗಳನ್ನು ಉತ್ಪಾದಿಸುತ್ತದೆ. ಈ ಹಾರ್ಮೋನ್‌ಗಳ ವರ್ತನೆಯಿಂದಾಗಿ ಅಂಡಾಶಯ ಈಸ್ಟ್ರೊಜೆನ್ ಹಾರ್ಮೊನುಗಳನ್ನು ಬಿಡುಗಡೆ ಮಾಡುತ್ತದೆ. ಈಸ್ಟ್ರೋಜನ್ ಹಾರ್ಮೋನುಗಳ ರಕ್ತ ಪ್ರವಾಹದಲ್ಲಿ ಹರಿಯುವುದರ ಪರಿಣಾಮವಾಗಿ ಗರ್ಭಕೋಶದ ಹಳೆಯ ಗೋಡೆಯು ಕಳಚಿಹೋಗಿ ಜನನಾಂಗದ ಮೂಲಕ "ಋತುಸ್ರಾವ" ವಾಗಿ ಹೊರ ಹೋಗುದೆತ್ತ.

ಋತುಸ್ರಾವದ ವೈಜ್ಞಾನಿಕ ಹಿನ್ನೆಲೆಯನ್ನು ಅರ್ಥಮಾಡಿಕೊಳ್ಳದ ಮನಸ್ಸು ಅದಕ್ಕೆ ಅಸ್ಪೃಶ್ಯತೆಯನ್ನು ಆರೋಪಿಸಿತು. ಈ ಅಸ್ಪೃಶ್ಯತೆಯ ಆರೋಪಕ್ಕೂ ಹಾಗೂ ಸ್ತ್ರೀಗೆ ದೊರೆತಿರುವ ಕೀಳರಿಮೆಯ ಸ್ಥಾನಕ್ಕೂ ನಿಕಟವಾದ ಸಂಬಂಧವಿದೆ.

ಬಾಲಕಿಯೊಬ್ಬಳು ಋತುಮತಿಯಾದಾಗ ಅವಳನ್ನು ಅಸ್ಪೃಶ್ಯತೆಯಿಂದ ನೋಡಿಕೊಳ್ಳಲಾಗುತ್ತದೆ. ಅವಳು ಅಶುದ್ಧಳೆಂದು ಪ್ರತ್ಯೇಕವಾದ ಸ್ಥಳವನ್ನು ನೀಡಲಾಗುತ್ತದೆ. ಅವಳನ್ನು ಮುಟ್ಟಿಸಿಕೊಂಡರೆ, ಮೈಲಿಗೆಯಾಗುತ್ತದೆ. ಮನೆಯ ಮೂಲೆಯೊಂದರಲ್ಲಿ ಆಕೆ ಮೂಕವಾಗಿ ರೋಧಿಸುತ್ತಾ ಕುಳಿತಿರಬೇಕು.

ಮೈಲಿಗೆ ಕಳೆದ ಮೇಲೆ ಅವಳನ್ನು ಸ್ನಾನಮಾಡಿಸಿ ಒಳಗೆ ಕರೆದುಕೊಂಡು ಹಬ್ಬವನ್ನು ಮಾಡುತ್ತಾರೆ. ನಂತರು ಸಂಬಂಧಿಕರನ್ನೆಲ್ಲಾ ಕರೆಸಿ ಔತಣ ನೀಡಿ ಊರವರನ್ನೆಲ್ಲಾ ಕರೆದು ಸಾರ್ವಜನಿಕವಾಗಿ, ಆರತಿಯನ್ನೂ ಮಾಡಲಾಗುತ್ತದೆ. ಕೆಲವು ಮನೆಗಳಲ್ಲಂತೂ, ಮೈಕಾಸುರನ ಹಾವಳಿಯನ್ನೆಬ್ಬಿಸಿ, ಮಗಳು ದೊಡ್ಡವಳಾದ ಸಮಾಚಾರವನ್ನು ಜಗಜ್ಜಾಹೀರು ಮಾಡಿ ಮದುವೆ ಮನೆಯ ಸಂಭ್ರಮವನ್ನೇ ಸೃಷ್ಠಿಸುತ್ತಾರೆ.

ಇಂತಹ ಸಂಪ್ರದಾಯಗಳನ್ನು ಆಚರಿಸುವ ಉದ್ದೇಶವೇನು? ಋತುಸ್ರಾವ ಮೈಲಿಗೆಯ ಸಂಗತಿಯೆ? ಹೀಗೆ ಅನೂಚಾನವಾಗಿ ರೂಢಿಸಿಕೊಂಡ ಪದ್ಧತಿಗಳು ಹೆಣ್ಣುಮಕ್ಕಳ ಮನಸ್ಸಿನ ಮೇಲೆ ಎಂತಹ ಪರಿಣಾಮವನ್ನು ಉಂಟುಮಾಡುತ್ತವೆ? ಈ ಪ್ರಶ್ನೆಗಳನ್ನು ವಿಶ್ಲೇಷಿಸಿದಾಗ ಹೆಣ್ಣುಮಕ್ಕಳ ಮನಸ್ಸಿನ ಮೇಲೆ ಉಂಟಾಗುವ ಆಘಾತವನ್ನು ಗ್ರಹಿಸಬಹುದು.

ತನ್ನ ದೇಹದಲ್ಲಿ ಉಂಟಾದ ಬದಲಾವಣೆಯ ಅರ್ಥ ಗ್ರಹಿಸದ ಮನಸ್ಸು ಸಂಕೋಚದಿಂದ ಮುದುಡುತ್ತದೆ. ತನ್ನ ಸ್ನೇಹಿತೆಯರಿಗಾದ ಅನುಭವ ಅಥವಾ ಸುತ್ತೆಲ್ಲ ನೋಡಿದುದರಿಂದ ಋತುಸ್ರಾವವನ್ನು ಗ್ರಹಿಸಲು ಸಾಧ್ಯವಾದರೂ ಅದನ್ನು ಒಪ್ಪಿಕೊಳ್ಳಲು ಮನಸ್ಸು ನಿರ್ದಾಕ್ಷಿಣ್ಯವಾಗಿ ಹಿಂಜರಿಯುತ್ತದೆ, ಎಲ್ಲರ ಗಮನ ಸೆಳೆಯುವ, ತಾನು ಇನ್ನು ದೊಡ್ಡವಳಾದೆನೆಂಬ, ತನ್ನ ಸ್ವತಂತ್ರಕ್ಕೆ ಅಡ್ಡಿಯಾಗುತ್ತದೆಂದು ವಿದ್ಯಾಭ್ಯಾಸದ ತಡೆಗೆ ಕಾರಣವಾಗುತ್ತದೆಂಬ, ಹಲವಾರು ಕಾರಣಗಳಿಂದ ಮನಸ್ಸು ಬದಲಾದ ದೇಹದೊಡನೆ ಸ್ಪಂದಿಸುವುದಿಲ್ಲ. ಬದಲಾಗಿ, ಅದರ ಬಗ್ಗೆ ಅಸಹ್ಯ, ತಿರಸ್ಕೃತ ಭಾವನೆಯನ್ನು ಬಳಸಿಕೊಳ್ಳುತ್ತವೆ, ಅದೊಂದು ಸಹಜ ನೈಸರ್ಗಿಕ ಬದಲಾವಣೆಯೆಂದು ಸ್ವೀಕರಿಸಲು ಮನಸ್ಸು ನಿರಾಕರಿಸುತ್ತದೆ.

ಬಹುಪಾಲು ಕುಟುಂಬಗಳಲ್ಲಿ ಪ್ರತಿ ತಿಂಗಳೂ ಹುಡುಗಿಯರು ಪ್ರತ್ಯೇಕ ಸ್ಥಳಗಳಲ್ಲಿ ಕುಳಿತುಕೊಳ್ಳಬೇಕಾಗುತ್ತದೆ. ಊಟ, ಬಟ್ಟೆ, ನೀರು ಮುಂತಾದವುಗಳಿಗೆಲ್ಲಾ ಮನೆಯ ಇತರರನ್ನು ಅವಲಂಬಿಸಬೇಕಾತ್ತದೆ ಮನೆಯಲ್ಲಿ ಅರ್ಥಮಾಡಿಕೊಳ್ಳುವ, ಸದಸ್ಯರು ಇದ್ದರೆ ಸರಿ. ಅಂತಹ ಸಹಕಾರವಿಲ್ಲದ ಕುಟುಂಬದಲ್ಲಿ ಮನಸ್ಸಿನಲ್ಲಿ ಉಂಟಾಗುವ ಆಂತರಿಕ ದುಗುಡದಿಂದಾಗಿ ತಮ್ಮನು ತಾವು ದ್ವೇಷಿಸುವ ಮನೋಭಾವನೆಯನ್ನು ರೂಢಿಸಿಕೊಳ್ಳುತ್ತಾರೆ.

ಋತುಮತಿಯಾದ ಹುಡುಗಿಯ ಮೇಲೆ ಹೇರುವ

ನಿರ್ಬಂಧಗಳು ಅಸಂಖ್ಯ, ಅವಳು ಸ್ಕೂಲಿಗೆ ಹೋಗುತ್ತಿದ್ದು, ಸ್ಕರ್ಟ್ ತೊಡುತ್ತಿದ್ದರೆ, ಇದ್ದಕಿದ್ದ ಹಾಗೆ ಉದ್ದನೆಯ ಲಂಗ. ದಾವಣಿಗೆ ಹೊಂದಿಕೊಳ್ಳಬೇಕಾಗುತ್ತದೆ, ಈ ಬದಲಾವಣೆ ಅವಳ ದೇಹದಲ್ಲಿ ಉಂಟಾದ ಬದಲಾವಣೆಗೆ ಪ್ರತಿಬಿಂಬವಾಗುತ್ತವೆ. ಬಹುಪಾಲು ಹೆಣ್ಣುಮಕ್ಕಳು ಇದನ್ನು ಒಪ್ಪಿಕೊಳ್ಳಲು ಹಿಂಜರಿಯುತ್ತಾರೆ. ಆದರೆ ಮನೆಯ ಹಿರಿಯರೆದುರು ದನಿ ಎತ್ತಲಾಗದ ಹುಡುಗಿಯರು ಅನಿವಾರ್ಯವಾಗಿ ಒಪ್ಪಿಕೊಳ್ಳುತ್ತಾರೆ. ಹಳ್ಳಿಗಾಡುಗಳಲ್ಲಿ ಹುಡುಗಿಯರು ಋತುಮತಿಯಾದರೆ ವಿದ್ಯಾಭ್ಯಾಸಕ್ಕೆ ಸಂಚಕಾರ ಹಾಕುತ್ತಾರೆ. ದೊಡ್ಡವಳಾದ ಹುಡುಗಿಯನ್ನು ಶಾಲೆ ಬಿಡಿಸಿ, ಮನೆಗೆಲಸವನ್ನು ಕಲಿಸಿ ಮದುವೆಯ ತಯಾರಿ ಮಾಡುತ್ತಾರೆ. ವಿದ್ಯಾಭ್ಯಾಸದ ಹಂಬಲ ಹೊತ್ತ ಹುಡುಗಿಯರ ಆಸೆ–ಆಕಾಂಕ್ಷೆಗಳು ಅವರಿಗರಿವಿಲ್ಲದೆ ಬುಡದಲ್ಲಿಯೇ ಕತ್ತರಿಸಲ್ಪಡುತ್ತವೆ.

ಹುಡುಗಿಯರ ಮೇಲೆ ಹೇರುವ ನಿರ್ಬಂಧಗಳಲ್ಲಿ ಪ್ರಾಮುಖ್ಯವಾದುದು ಅವರ ನಡೆನುಡಿಯ ಮೇಲೆ ಸದಾ ಕಣ್ಣಿಟ್ಟಿರುವುದು. ಋತುಮತಿಯಾಗುವವರೆಗೂ ಇದ್ದ ಸ್ವಾತಂತ್ರ್ಯ ನಂತರ ಇದ್ದಕ್ಕಿದ್ದಂತೆ ಮಾಯವಾಗುತ್ತದೆ, ಗೆಳತಿಯರ ಮನೆಗೆ ಹೋಗಲು, ಆಟವಾಡಲು, ಹೀಗೆ ಎಲ್ಲದಕ್ಕೂ ಮನೆಯಲ್ಲಿ ಸಮ್ಮತಿ ಪಡೆಯಬೇಕಾಗುತ್ತದೆ. ಹೀಗೆ ಸಮ್ಮತಿ ಕೇಳಲಾಗದ ಹುಡುಗಿಯರು ಕ್ರಮೇಣ ಸುಮ್ಮನಾಗಿಬಿಡುವ ಕಲೆಯನ್ನು ರೂಢಿಸಿಕೊಂಡು ಬಿಡುತ್ತಾರೆ. ಕೇಳುವ ಧೈರ್ಯಮಾಡುವ ಹುಡುಗಿಯರು ಉಂಟಾಗುವ ನಿರಾಶೆಯಿಂದ ತಮ್ಮ ಮನಸ್ಸಿನ ಆಸೆ-ಆಕಾಂಕ್ಷೆಗಳನ್ನು ಹತ್ತಿಕ್ಕಿಕೊಳ್ಳುತ್ತಾರೆ.

ಅಸ್ಪೃಶ್ಯತಾ ದೃಷ್ಟಿಕೋನ, ಹಾಗೂ ಹುಡುಗಿಯರ ಮೇಲೆ ಇದ್ದಕ್ಕಿದ್ದಂತೆ ಹೇರುವ ನಿರ್ದಾಕ್ಷಿಣ್ಯ, ನಿರ್ಬಂಧಗಳು ಹುಡುಗಿಯರ ಚೇತನವನ್ನು ಬತ್ತಿಸುತ್ತದೆ. ಋತುಸ್ರಾವದ ಬಗ್ಗೆ ಅವಳಿಗೆ ನೈಜವಾದ ವೈಜ್ಞಾನಿಕ ತಿಳುವಳಿಕೆಯನ್ನು ತಂದೆ ತಾಯಂದಿರು ತಮ್ಮ ಹೆಣ್ಣುಮಕ್ಕಳಿಗೆ ನೀಡುವುದಿಲ್ಲ. ತನ್ನ ದೇಹದಲ್ಲುಂಟಾದ ಬದಲಾವಣೆಯನ್ನು ಒಪ್ಪಿಕೊಳ್ಳಲು ಸರಿಯಾದ ತಿಳುವಳಿಕೆಯೊಂದಿಗೆ ಸಮಯ ಬೇಕಾಗುತ್ತದೆ. ಇದ್ದಕ್ಕಿದ್ದಂತೆ ಹೊರಗಿನಿಂದ ಹೇರಲಾಗುವ ಒತ್ತಡಗಳು ಹುಡುಗಿಯರನ್ನು ಕುಗ್ಗಿಸುತ್ತವೆ. ಅವರ ವ್ಯಕ್ತಿತ್ವವನ್ನು ಸಂಪೂರ್ಣವಾಗಿ ನಾಶಮಾಡುತ್ತವೆ. ಅವರ ಮಾನಸಿಕ ತುಮುಲ, ದ್ವಂದ್ವಗಳನ್ನು ವ್ಯಕ್ತಪಡಿಸಲು ಅವಕಾಶ ಸಿಗುವುದಿಲ್ಲ. ಇಂತಹ ಸಂಕೀರ್ಣ ಸ್ಥಿತಿಯಿಂದಾಗಿ ಮಾನಸಿಕ ಆಘಾತಕ್ಕೊಳಗಾದ ಹುಡುಗಿಯರ ನಿದರ್ಶನಗಳೂ ಸಾಕಷ್ಟು ಇದೆ. ಅವಳ ಮಾತುಕತೆ, ನಗು, ನಡೆ, ಪ್ರತ್ಯೇಕ ಸ್ಥಳ, ಊಟ, ತಿಂಡಿ, ಹೀಗೆ ಸಂಪೂರ್ಣವಾಗಿ ಬಂಧಿಸುವುದರಿಂದ ಹುಡುಗಿಯರು ಸಹಜವಾಗಿಯೇ ಕೀಳರಿಮೆಯನ್ನು ಬೆಳೆಸಿಕೊಳ್ಳುತ್ತಾರೆ. ಈ ಸಮಸ್ಯೆಯ ಸುತ್ತ ನಮ್ಮ ತಂದೆ–ತಾಯಂದಿರು ಯೋಚಿಸಿಯಾರೆ?

ಎಚ್. ಎಸ್. ಆರ್.

ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು ಎಚ್. ಎಸ್. ರಾಜೇಶ್ವರಿ, ಮಾನವಿ ಮುದ್ರಣಾಲಯ,
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು — ೫೬೦೦೬೭.

ನಂ ಮ್ಯಾಗ್ (5) ಪಿಆರ್‌ಬಿ ಡಿಕ್ಲೇರ್ಡ್: 284 | 8889

## ತಾವು ಏನೇ ಪದಾರ್ಥ ಕೊಂಡರೂ ಬಿಲ್ ಬೇಕೇ ಬೇಕೆಂದು ಕೇಳಿ ಪಡೆಯಿರಿ

ಶಾಲೆ, ಆಸ್ಪತ್ರೆ, ರಸ್ತೆ ಸೌಲಭ್ಯಗಳು ಮತ್ತು ಇತರೆ ಅನೇಕ ಸಮಾಜ ಕಲ್ಯಾಣ ಕಾರ್ಯಕ್ರಮಗಳಿಗೆ ತೆರಿಗೆ ಹಣ ಲಭಿಸುತ್ತದೆ. ನೀವು ಬಿಲ್ ಪಡೆಯದಿದ್ದರೆ ಅಂಗಡಿಯವರು ತೆರಿಗೆ ಹಣ ಹಾರಿಸುತ್ತಾರೆ, ಇದರಿಂದ ಸರ್ಕಾರಕ್ಕೆ ನ್ಯಾಯವಾಗಿ ಸಲ್ಲಬೇಕಾದ ಹಣ ಸಲ್ಲದೆ ಅನೇಕ ಅಭಿವೃದ್ಧಿ ಯೋಜನೆಗಳು ಸ್ಥಗಿತಗೊಳ್ಳುತ್ತವೆ. ತೆರಿಗೆಗಳು ಒಂದು ರಾಷ್ಟ್ರ ಅಭಿವೃದ್ಧಿಯಾಗಲು ಸಹಾಯ ಮಾಡುತ್ತವೆ. ತೆರಿಗೆ ವಂಚನೆಗಳ ಬಗ್ಗೆ ಸುಳಿವು ನೀಡಿ ನೀವು ಈ ಅಭಿವೃದ್ಧಿ ಕಾರ್ಯಗಳ ಪ್ರಗತಿಗೆ ನೆರವಾಗಿ, ಜೊತೆಗೆ ಹಾಗೆ ಮಾಡುವುದರಿಂದ ನಿಮಗೂ ಪ್ರೋತ್ಸಾಹದಾಯಕ ನಗದು ಬಹುಮಾನ ಸಿಗುತ್ತದೆ.

**ಹೆಚ್ಚಿನ ವಿವರಗಳಿಗೆ ದಯವಿಟ್ಟು ಸಂಪರ್ಕಿಸಿ:—**

ಸಾರ್ವಜನಿಕ ಸಂಪರ್ಕಾಧಿಕಾರಿ,
ಆಯುಕ್ತರವರ ಕಛೇರಿ, ವಾಣಿಜ್ಯ ತೆರಿಗೆಗಳು,
೧ ನೇ ಮುಖ್ಯ ರಸ್ತೆ, ಗಾಂಧಿನಗರ,
ಬೆಂಗಳೂರು — ೫೬೦೦೦೯.

ದೂರವಾಣಿ : ೨೯೨೪೫ ಅಥವಾ ೭೫೦೦೧ — ೨೧೨.

**" ತೆರಿಗೆ ವಂಚನೆ ಸಮಾಚಾರ ಒದಗಿಸಿದರೆ ಆಕರ್ಷಕ ಬಹುಮಾನ "**

" ಕರ್ನಾಟಕ ವಾರ್ತೆ "

ಹರಿ: ೨೬೯೮೮,